# ಪ್ರಾಣದಾನ.

[[illegible] ಐತಿಹಾಸಿಕ ಕಥೆ]




ಲೇಖಕ —

ಶ್ರೀಪಾದ ಭಾನು ಬಿಳ್ಕ,

ಬಿ. ಎ. ಎಲ್. ಎಲ್. ಬಿ. ವಕೀಲ, ಹಾವೇರಿ.



೧೯೩೧





ಬೆಲೆ ೩ ಆಣೆ

# ಪ್ರಾಣದಾನ.

[ಪುಟ್ಟ ಐತಿಹಾಸಿಕ ಕಥೆ]



ಲೇಖಕ. —

ಶ್ರೀಪಾದ ಭಾನು ಬಿಳ್ಕಿ,

ಬಿ. ಎ. ಎಲ್. ಎಲ್. ಬಿ. ವಕೀಲ, ಹಾವೇರಿ.

ಪ್ರಕಾಶಕ:—

ಯ. ಗು. ಕುಲಕರ್ಣಿ,

ಸಂಪಾದಕ ಸ. ಚ. ಆನಂದವನ.

೧೯೩೧

ಬೆಲೆ ೩ ಆಣೆ

KARNATAK BOOK-DEPOT.

# ಪ್ರಕಾಶಕರ ಎರಡು ಮಾತುಗಳು.



ನಮ್ಮ ಮಿತ್ರ ಶ್ರೀ. ಬೆಳ್ಳಿಯವರು ಶ್ರೀಯುತ ಗುರ್ಜರರವರು ಮರಾಠಿಯಲ್ಲಿ ಬರೆದ ಒಂದು ಐತಿಹಾಸಿಕ ಕಥೆಯ ಆಧಾರದಿಂದ ಇದನ್ನು ಬರೆದಿರುತ್ತಾರೆ. ಈ ಪುಟ್ಟ ಕಥೆಯಲ್ಲಿ ನಮ್ಮ ವಿಜಯನಗರ ಸಾಮ್ರಾಜ್ಯದ ಅರಸನಾದ ಬುಕ್ಕರಾಯನ ನ್ಯಾಯನಿಷ್ಠುರತೆಯೂ, ಬಡವೆಯಾದರೂ ಶೀಲಸಂಪನ್ನಳಾದ ಒಬ್ಬ ತರುಣಸಾಧ್ವಿಯ ಪ್ರಾಣದಾನವೂ ಅಪೂರ್ವವಾಗಿರುತ್ತವಲ್ಲದೆ, ಈ ಕಥೆಯ ವಾಚನದಿಂದ ಆಗಿನ ರಾಜ ಪ್ರಜೆಗಳೆಲ್ಲರೂ ಎಂಥ ಉಚ್ಚಭಾವನೆಯುಳ್ಳವರಾಗಿದ್ದರೆಂಬುದು ಚೆನ್ನಾಗಿ ವ್ಯಕ್ತವಾಗುತ್ತಿದೆ. ಕನ್ನಡಿಗರೆಲ್ಲರೂ ಈ ಪುಸ್ತಕವನ್ನು ಒಮ್ಮೆಯಾದರೂ ಓದಲೇಬೇಕೆಂದು ಬಯಿಸಿ, ಈ ಕಥೆಯನ್ನು ಈ ಸಾರೆಯ ಸ. ಚ. ಯಲ್ಲಿ ಪ್ರಕಟಿಸಿರುತ್ತೇವೆ.

ಪ್ರಕಾಶಕ.





# ಪ್ರಾಣದಾನ.

## (೧)



ಐದಾರು ಶತಮಾನಗಳ ಹಿಂದಿನ ಸಂಗತಿಯು. ಆರ್ಯ-ಭೂ-ವಧುವಿನ ಭಾಲಪ್ರದೇಶದ ಮೇಲಿನ ಸ್ವಾತಂತ್ರ್ಯತಿಲಕವು ಇನ್ನೂ ಅಳಿಸಿರಲಿಲ್ಲ! ದಕ್ಷಿಣ ಹಿಂದುಸ್ಥಾನದಲ್ಲಿ ವಿಜಯನಗರ ಸಾಮ್ರಾಜ್ಯದ ಸ್ವಾತಂತ್ರ್ಯದ ಧ್ವಜವು ನೋಡಿದಲ್ಲೆಲ್ಲ ಮೆರೆಯುತ್ತಿತ್ತು. ಅದು ಕರ್ನಾಟಕ ಸಾಮ್ರಾಜ್ಯದ ವೈಭವದ ಅರುಣೋದಯದ ಕಾಲವು.

ತುಂಗಭದ್ರೆಯ ತೀರದಲ್ಲಿ ಒಂದು ಸಣ್ಣ ಹಳ್ಳಿಯ ಸಮೀಪದಲ್ಲಿ ವನ-ಪ್ರದೇಶಕ್ಕೆ ಹೊಂದಿ ಒಂದು ಮುರಕಳಿಗೆ ಬಂದ ಚಿಕ್ಕ ಗುಡಿಸಲವು ದೃಗ್ಗೋಚರವಾಗುತ್ತಿತ್ತು. ಸಾಯಂಕಾಲದ ವೇಳೆಯು. ಆ ಚಪ್ಪರದಲ್ಲಿ ಈರ್ವರು ಕುಳಿತಿದ್ದರು. ಒಬ್ಬನು ತರುಣನು. ಇನ್ನೊಬ್ಬಳು ತರುಣಿಯು. ಆ ತರುಣೀಮಣಿಯು ಆ ಚಪ್ಪರದ ಬಾಗಿಲ ಹತ್ತರ ಬೆಳಕಿನಲ್ಲಿ ಕುಳಿತು ಒಂದು ಕಟ್ಟಿಗೆಯ ರಾಟಿಯ ಮೇಲೆ ನೂಲು ತೆಗೆಯುತ್ತಿದ್ದಳು. ಅವಳ ಬಣ್ಣವು ಸಾದಗಪ್ಪಿನದು; ಆದರೆ ಅವಳ ಮುಖ-ಲಕ್ಷಣವು ಮಾತ್ರ ಸೊಬಗುಪೂರ್ಣವಾಗಿತ್ತು. ಅವಳ ಆ ಸೌಂದರ್ಯಯುಕ್ತ ರೂಪಕ್ಕೆ ನವ ತಾರುಣ್ಯದ ಪ್ರಭೆಯು ಬೆಳಗುತ್ತಿತ್ತು. ಆದರೆ ಈ ವೇಳೆಯಲ್ಲಿ ಮಾತ್ರ ಅವಳ ಮುಖವು ಬಹು ಮ್ಲಾನವಾಗಿತ್ತು. ನಡುನಡುವೆ ಅವಳು ನಿಟ್ಟುಸಿರು ಬಿಡುತ್ತಿದ್ದಳು. ಅವಳು ಕೈಯಿಂದ ರಾಟಿಯನ್ನೇನೋ ತಿರುವುತ್ತಿದ್ದಳು, ಆದರೆ ಆಗ ಅವಳ ಲಕ್ಷ್ಯವು ಅತ್ತಕಡೆಗೆ ಇರಲಿಲ್ಲ. ಆದ್ದರಿಂದ ನೂಲಿನ ಎಳೆಯು ಆಗಾಗ್ಗೆ ಹರಿಯುತ್ತಿತ್ತು. ಅದನ್ನು ಸರಿಪಡಿಸಿಕೊಳ್ಳುವದರಲ್ಲಿಯೇ ಅವಳು ಒದ್ದಾಡುತ್ತಿದ್ದಳು.

ಅವಳಿಂದ ಸ್ವಲ್ಪ ಅಂತರದ ಮೇಲೆ ಆ ತರುಣನು ಒಂದು ಹರಕ ಹಾಗು ಹೊಲಸಾದ ತಟ್ಟಿನ ಮೇಲೆ ಕುಳಿತಿದ್ದನು. ಅವನ ವರ್ಣವು ಕಪ್ಪೇ. ಅವನ ದೇಹಯಷ್ಟಿಯು ಮಧ್ಯಮತರದ್ದಾಗಿತ್ತು. ಅವನ ಮುಖವು ತೇಜಃಪುಂಜವಾಗಿರದಿದ್ದರೂ ಹೀನ-ದೀನವಾಗಿರಲಿಲ್ಲ. ಅವನ ಚಿತ್ತವೃತ್ತಿಯು ಆ ತರುಣಿಯ

ಅವರೀರ್ವರೂ ಖಿನ್ನರಾಗಿ ಕುಳಿತಿದ್ದರು. ಯಾರ ಮುಖದಿಂದಲೂ ಶಬ್ದಗಳು ಹೊರಬೀಳುತ್ತಿರಲಿಲ್ಲ.

ಹೀಗೆ ಬಹುಕಾಲವು ಕಳೆಯಿತು. ತರುಣಿಯ ತುಟಿಗಳು ಸ್ಫುರಣ ಹೊಂದಿದಂತೆ ಕಾಣುತ್ತಿದ್ದರೂ ತುಟಿಯ ವರೆಗೆ ಬಂದ ಅವಳ ಶಬ್ದಗಳು ಹೊರಬೀಳದೆ ಹಿಂದಕ್ಕೆ ತಿರುಗುತ್ತಿದ್ದವು.

ಇಂಥ ಪರಿಸ್ಥಿತಿಯಲ್ಲಿಯೂ ಕೆಲವು ಕ್ಷಣಗಳು ಗತಿಸಿದವು. ಆಗ ಮಾತ್ರ ಆ ತರುಣನು ಸುಮ್ಮನಿರದಾದನು. ಆ ತರುಣಿಯು ಕಡೆಗೆ ಪ್ರೇಮಕರುಣದೃಷ್ಟಿಯಿಂದ ನೋಡುತ್ತ: "ಮೀನಾ" ಎಂದು ಕರೆದನು.

ಅದಕ್ಕೆ ಮೀನಾ ಅಥವಾ ಮೀನಾಕ್ಷಿಯು ಏನೂ ಮಾತಾಡಲಿಲ್ಲ. ಅವಳ ಮನದ ದುಃಖಾವೇಗವು ಮಾತ್ರ ಕ್ಷಣಕ್ಷಣಕ್ಕೆ ಹೆಚ್ಚತೊಡಗಿತ್ತು.

ಆ ತರುಣನು ಅತ್ಯಂತ ಕರುಣಸ್ವರದಿಂದ ಮತ್ತೆ. "ಮೀನಾ! ಮೀನಾ!" ಎಂದು ಕರೆದನು ಮತ್ತು "ಮೀನಾ ಒಂದು ಮಾತನ್ನಾದರೂ ಆಡಬಾರದೇ? ಎಷ್ಟುಹೊತ್ತಿನ ವರೆಗೆ ಹೀಗೆ ಮೌನಧಾರಣ ಮಾಡುವಿ? ನಾನು ಬಂದಾಗಿನಿಂದ ಈಗ ಆಡುವಿ, ಇನ್ನೊಂದು ಕ್ಷಣಕ್ಕೆ ಮಾತನಾಡುವಿ, ಎಂದು ಒಂದೇಸವನೆ ಮಾರ್ಗನಿರೀಕ್ಷಿಸುತ್ತ ಕುಳಿತಿರುವೆನು, ಆದರೆ ನಿನ್ನ ಬಾಯಿಂದ ಒಂದು ಶಬ್ದ ಸಹ ಹೊರಬೀಳಲೊಲ್ಲದು! ಪ್ರೇಮಲೆ, ಹೀಗೇಕೆ? ತಮ್ಮ ಜನರ ಮೇಲೆ ಯಾರಾದರೂ ಈ ರೀತಿ ರೇಗುವರೇ? ಮೀನಾ—"ಈ ಪ್ರಕಾರವಾಗಿ ಉದ್ವೇಗಕರ ಉದ್ಗಾರಗಳನ್ನು ಹೊರಪಡಿಸಿದನು

ಆಗ ಮೀನಾಕ್ಷಿಯು ತನ್ನ ವಿಶಾಲವಾದ ನೇತ್ರಗಳನ್ನು ತನ್ನ ಪತಿಯ ಮುಖದ ಕಡೆಗೆ ಗುರಿಯಿಟ್ಟು ಕ್ಷಣದಲ್ಲಿ ಕೆಳಗೆ ನೆಲದ ಕಡೆಗೆ ನೋಡುತ್ತ ತನ್ನ ನೂಲು ತೆಗೆಯುವ ಕ್ರಮವನ್ನು ಸಾಗಿಸಿದಳು. ಮಧ್ಯಂತರದಲ್ಲಿ ಅವಳ ತುಟಿಯು ಅಲ್ಲಾಡಿದಂತೆ ಕಾಣಿಸಿತು. ಆದರೆ ಅಷ್ಟರಲ್ಲಿಯೇ ಅವಳು ತನ್ನ ತುಟಿಯನ್ನು ಕಚ್ಚಿಕೊಂಡು ಸ್ತಬ್ಧಳಾದಳು!

ಧನಪತಿಯು-ಇದು ಆ ತರುಣನ ಹೆಸರು-ಈಗಂತೂ ಹೆಚ್ಚಾಗಿ ಹಣ್ಣಾದನು. ಅವನು ಕುಳಿತ ಸ್ಥಳದಿಂದ ಮೇಲಕ್ಕೆದ್ದು ಮೀನಾಕ್ಷಿಯ ಸಮೀಪಕ್ಕೆ ಹೋಗಿ, ಒಂದು ಕೈಯಿಂದ ರಾಟಿಯನ್ನು ಹಿಡಿದು ನಿಲ್ಲಿಸಿ, ಮತ್ತೊಂದು ಕೈಯಿಂದ ಅವಳ ಗದ್ದವನ್ನು ಹಿಡಿದು ಮುಖವನ್ನು ಸ್ವಲ್ಪ ಮೇಲಕ್ಕೆತ್ತಿ ಬಹು ಆಕ್ಕರದಿಂದ: 'ಮೀನಾ! ನನ್ನ ಮೇಲೆ ಹೀಗೆ ಸಿಟ್ಟು ಮಾಡಬೇಕೇ? ಮಾತಾಡು, ಪ್ರಿಯೇ, ಒಂದಾದರೂ ಮುದ್ದಿನ ಮಾತಾಡು!' ಎಂದು ಅಂದನು.

ಮೀನಾಕ್ಷಿಯು ಮೇಲಕ್ಕೆ ನೋಡದೆ ಅಧೋವದನೆಯಾಗಿ ದುಃಖದಿಂದ ಒಂದು ನಿಟ್ಟುಸಿರು ಬಿಟ್ಟು ಮೆಲ್ಲನೆ: "ಏನು ಮಾತಾಡಲಿ?" ಎಂದು ಒಂದು ತುಟಿ ಎರಡು ಮಾಡಿದಳು.

ಪತ್ನಿಯು ಮೌನಭಂಗ ಮಾಡಿದ್ದಕ್ಕಾಗಿ ಬಹು ಆನಂದಬಟ್ಟ ಧನಪತಿಯು "ಏನಾದರೂ ಮಾತಾಡು! ನಿನಗೆ ಬೇಕಾದ್ದನ್ನು ಒಡನುಡಿ. ನಿಷ್ಠುರವಾದ ಮಾತುಗಳನ್ನಾದರೂ ಆಡು. ಕಠಿಣ ನುಡಿಗಳನ್ನು ನುಡಿ ಬೇಡ, ಮೀನಾ! ಬೇಡ, ನೀನು ಸಿಟ್ಟಾಗಬೇಡ. ನಾನು ಏನೋ ಹರಟಹತ್ತಿರುತ್ತೇನೆ. ಲಗ್ನವಾದಂದಿನಿಂದ ನನ್ನ ಸಂಗಡ ಮಾತಾಡುವಾಗ ನಿನ್ನ ಬಾಯಿಂದ ಅಮೃತಕ್ಕಿಂತಲೂ ಮಧುರತರವಾದ ಶಬ್ದಗಳಲ್ಲದೆ ಬೇರೆ ಶಬ್ದಗಳು ಹೊರಬಿದ್ದಿರುವದಿಲ್ಲ. ನಿನ್ನ ಮೌನದಿಂದ ನಾನು ಹೌಹಾರಿ ಹೋಗಿದ್ದೇನೆ. ಆ ಕಾರಣದಿಂದಲೇ ಈ ರೀತಿ ಏನೋ ವಿಪರೀತವಾದ ಶಬ್ದಗಳು ನನ್ನ ಮುಖದಿಂದ ಹೊರಚಲ್ಲಹತ್ತಿವೆ! ಆ ವಿಷಯವಾಗಿ ಮೀನಾ- ನನ್ನ ಪ್ರಾಣಪದಕವೇ, ನೀನು ನನ್ನನ್ನು ಕ್ಷಮಿಸು. ನಿನ್ನ ಹೊರತು, ಮೀನಾ, ಈ ವಿಶಾಲವಾದ ಜಗತ್ತಿನಲ್ಲಿ ಈ ಕಂಗಾಲನಾದ ಧನಪತಿಯ ಬಳಿಯಲ್ಲಿ ಏನಿರುವದು?" ಎಂದು ಮಾತಾಡುವಾಗ ಧನಪತಿಯ ಕಂಗಳು ಜಲ-ಪೂರ್ಣವಾದವು, ಹಾಗು ಅವನ ಗದ್ಗದಿತವಾದ ಕಂಠದಿಂದ ಶಬ್ದಗಳು ಹೊರಡದಾದವು!

ಪತಿಯ ಈ ಕರುಣಾಪೂರ್ಣವಾದ ಅವಸ್ಥೆಯನ್ನು ನೋಡಿ, ಮೀನಾಕ್ಷಿಯ ಹೃದಯವೂ ಕಲಕಿತು. ಅವಳ ನೇತ್ರಗಳಿಂದಲೂ ಗಂಗಾ ಯಮುನೆಯ ಸಂಗಮವಾಯಿತು ತನ್ನ ಅಶ್ರು-ಪ್ರವಾಹದಿಂದ ಪತಿಯ ಅಂತಃಕರಣವು ಮತ್ತಿಷ್ಟು ದುಃಖಕ್ಕೆ ಈಡಾಗುವದೆಂದು ತಿಳಿದು ಕೂಡಲೆ ಅವಳು ತನ್ನ ಸೆರಗಿನಿಂದ ಕಣ್ಣೀರುಗಳನ್ನು ಒರಸಿಕೊಂಡು.—

"ಹೃದಯೇಶ್ವರಾ, ಏನಿದು?"

ಮೀನಾ, ಇಂದು ನಿನ್ನ ಹೃದಯವು ಇಷ್ಟೇಕೆ ಕಲ್ಲಾಯಿತು? ನೀನು ಇಷ್ಟು ನಿರ್ದಯಳಾದ ಕಾರಣವೇನು?

ಮೀನಾಕ್ಷಿಯು ತನ್ನ ಪತಿಯ ಕಡೆಗೆ ಒಮ್ಮೆ ಕಡೆಗಣ್ಣಿನಿಂದ ನೋಡಿ, ನಿಟ್ಟುಸಿರು ಬಿಡುತ್ತ: "ಏನು, ಕಡೆಗೆ ನಾನೇ ನಿರ್ದಯಳೇ? ಅವ್ವಯ್ಯಾ, ಇದೆಂಥ ವಿಪರೀತ ನ್ಯಾಯವವ್ವಾ!"

ಮೀನಾಕ್ಷಿಯ ಈ ಉದ್ಗಾರದಿಂದ ಆ ದೀನ ಧನಪತಿಯು ಬಹು ಮನೋ ಗೊಂದಲದಲ್ಲಿ ತೊಡಕಿ, ಒಳ್ಳೇ ಆಶ್ಚರ್ಯದಿಂದ: "ಅಂದರೇನು? ಮೀನಾ,

ವಿಪರೀತ ನ್ಯಾಯವು ಹೇಗೆ? ನೀನು ಅನ್ನುವದು ನನ್ನ ಬುದ್ಧಿಗೆ ನಿಲುಕಲೊಲ್ಲದಲ್ಲೇ!''

ನವಿಲಿನಂತೆ ಗೋಣು ಹೊರಳಿಸುತ್ತ ಮೀನಾಕ್ಷಿಯು: ''ಲಕ್ಷ್ಯದಲ್ಲಿ ಹೇಗೆ ಬಂದೀತು? ಬುದ್ಧಿಗೆ ಹೇಗೆ ನಿಲುಕೀತು? ಗಂಡಸರ ಸುಡುಗಾಡ ರೀತಿಯೇ ಅದು! ತಾವೇ ಕಣ್ಣಲ್ಲಿ ಬೊಟ್ಟು ಚುಚ್ಚಿ, ಪುನಃ ತಾವೇ ಕೇಳುವವರು ಯಾಕೆ ಅಳುವಿಯೆಂದು.''

ಧನಪತಿಯು ಆಶ್ಚರ್ಯಾತಿಶಯದಿಂದ. ''ಅಂದರೇನು? ಹೀಗೆ ನನ್ನ ಕೈಯಿಂದಾದ ಪ್ರಮಾದವಾದರೂ ಯಾವದು? ನನ್ನ ಸ್ಮರಣೆಗಂತೂ ಯಾವದೂ ಬರಲೊಲ್ಲದು. ಒಂದು ವೇಳೆ ಅಂಥದೊಂದು ತಪ್ಪಾಗಿದ್ದರೆ ನಾನು ಮೊದಲೇ ಆ ಬಗ್ಗೆ ಕ್ಷಮೆ ಬೇಡಿಕೊಳ್ಳುತ್ತೇನೆ. ಅಂದರೆ ಆಯಿತಷ್ಟೇ?''

ಮೀನಾಕ್ಷಿಯು ಸ್ವಲ್ಪ ನಗೆಮುಖವುಳ್ಳವಳಾಗಿ. ''ಓಹೋ! ಬರೇ ಬಾಯಿಂದ ಕ್ಷಮೆ ಬೇಡಿದರಾದೀತೇ?''

''ಹಾಗಾದರ ನಾನು ಏನು ಮಾಡಲಿ? ಅದನ್ನಾದರೂ ಹೇಳು........?''

''ನಾನು ಹೇಳಿದಂತೆಯೇ ಮಾಡಬೇಕು. ಅದಕ್ಕೆ ಒಪ್ಪಿಗೆಯಿದೆಯೋ?''

''ಮೀನಾ-ಮೀನಾ! — '' ಎಂದೆಂದು ಧನಪತಿಯು ಸ್ವಲ್ಪ ಆವೇಗದಿಂದ: ''ಈ ಪ್ರಶ್ನೆಯನ್ನು ನೀನು ಮಾಡಬೇಕೇ? ನಿನ್ನ ಶಬ್ದವೆಂದರೆ, ಪ್ರತ್ಯಕ್ಷ ಪರಮೇಶ್ವರಿಯ ಶಬ್ದವೆಂದೇ ತಿಳಿದು ಈ ವರೆಗೆ ವರ್ತಿಸಿರುವೆನಲ್ಲವೇ? ನಿನ್ನ ಆಜ್ಞೆಯಂತೆ ವರ್ತಿಸುವದರಲ್ಲಿಯೇ ನನಗೆ ನಿಜವಾದ ಆನಂದವು ಪ್ರಾಪ್ತವಾಗುತ್ತದೆ! ಅಂದಮೇಲೆ ನೀನು ನಿಷ್ಕಾರಣವಾಗಿ ಯಾಕೆ ನನ್ನ ಛಲನ ಮಾಡಹತ್ತಿರುವಿ? ಮೀನಾ, ನಾನು ಒಂದೊಡನೆಯೇ ನಿನ್ನನ್ನು 'ಏನಾಯಿತು?' ಎಂದು ಕೇಳಲು, ''ಏನೂ ಇಲ್ಲ. ನನಗೆ ಏನೂ ಕೇಳಬೇಡಿರಿ'' ಎಂದು ಆಡಿದ ನಿಷ್ಠುರವಾಣಿಯನ್ನು ನಾನು ಸಮಾಧಾನದಿಂದ ಕೇಳಿಕೊಂಡಿಲ್ಲವೇ?''

ಮೀನಾಕ್ಷಿಯು ಕ್ಷಣಕಾಲ ಸುಮ್ಮನೆ ಕುಳಿತು ಮತ್ತೆ: ''ನಾನೇ ಯಾಕೆ ಹೇಳಬೇಕು? ಆ ನಿಮ್ಮ ಮಾತು ನಿಮಗೆ ಗೊತ್ತಿಲ್ಲದಿರುವದೇ?''

''ವೆಂಕಟಸ್ವಾಮಿಯ ಆಣೆ ಮಾಡಿ ಹೇಳುತ್ತೇನೆ, ನನಗಂತೂ ನೀನು ಅನ್ನುವ ವಿಷಯವು ಗೊತ್ತಿಲ್ಲ-ಗೊತ್ತಾಗಲೊಲ್ಲದು; ಆದರೆ ನೀನು ಹೇಳಿದರೆ ಏನು ಕೆಡುವದು! ಮೀನಾ, ಅಪರಾಧವೇನ್ನಾದರೂ ಸಂಭವಿಸಿದ್ದರೆ ಆ ವಿಷಯವಾಗಿ ಮುಕ್ತಕಂಠದಿಂದ....''

ಪತಿಯನ್ನು ಮುಂದೆ ಮಾತಾಡಗೊಡದೆ ಮೀನಾಕ್ಷಿಯು:— ಈ ಹೊತ್ತು ಮುಂಜಾವಿನಲ್ಲಿ ನದಿಯ ಮೇಲೆ ನನಗೆ ರಂಗಮ್ಮನ ಭೆಟ್ಟಿಯಾಗಿತ್ತು. ಆಗ ಅವಳು ನನಗೊಂದು ಗುಪ್ತವಾದ ಮಾತನ್ನು ಹೇಳಿರುವಳು. ಆ ಮೊದಲ್ಗೊಂಡು ನನ್ನ ಮನಸ್ಸಿಗೆ ಸೊಗಸೆನಿಸಲೊಲ್ಲದು—''

ಆಗ ಧನಪತಿಯು ಹುಬ್ಬೇರಿಸಿ.—''ಗುಪ್ತಮಾತೇ?—ಅದಾವದು?''

ಪತಿಯ ಕಡೆಗೆ ತೀವ್ರದೃಷ್ಟಿಯಿಂದ ನೋಡುತ್ತ ತನ್ನ ಗೋಣನ್ನು ಅಲ್ಲಾಡಿಸುತ್ತ ಮೀನಾಕ್ಷಿಯು ಉಪರೋಧಿಕ ಸ್ವರದಿಂದ—''ಭಲ ಭಲ! ಸೋಗು ಮಾಡಲಿಕ್ಕೆ ಚನ್ನಾಗಿ ಬರುತ್ತದೆ! ನಿಜವಾಗಿಯೂ ನಟರಾಜರು! ಗುಪಿತವಾವುದೆಂದು ಏನೂ ಗೊತ್ತಿರದವರಂತೆ ನನ್ನನ್ನೇ ಕೇಳುತ್ತೀರಲ್ಲ!'' ಎಂದು ನುಡಿದಳು.

ಆಗ ಪಾಪ! ಆ ಬಡ ಧನಪತಿಯು ಮತ್ತಿಷ್ಟು ಗೊಂದಲದಲ್ಲಿ ಬಿದ್ದನು. ಅವನು ಆಶ್ಚರ್ಯದಿಂದ. ''ನನ್ನ ವಿಷಯವಾಗಿ ಗುಪಿತವೇ? ಅದು ನನಗೇ ಗೊತ್ತಿರಬಾರದೆ? ಮೀನಾ, ನಾನು ಇನ್ನೊಮ್ಮೆ ನಿನಗ ಒಂದು ಮಾತು ಹೇಳುತ್ತೇನೆ, ಕೇಳು. ಆಜನ್ಮದಲ್ಲಿಯೂ ನಿನ್ನಿಂದ ಯಾವದನ್ನೂ ಗುಪ್ತವಾಗಿ ಇಟ್ಟಿರುವದಿಲ್ಲ. ನನ್ನ ಮನಸ್ಸಿನ ಪ್ರತಿಯೊಂದು ಕಣವು ನಿನಗೆ ಗೋಚರವಾಗಿಯೇ ಇದೆ. ನೀನೇ ನನ್ನ ಮನೋಮಂದಿರದ ಅಧಿಷ್ಠಾತೃ-ದೇವತೆಯು! ನೀನು ಇದರ ಮೇಲೆ ಏನೇ ತಿಳಿದುಕೊ!'' ಈ ರೀತಿಯಾಗಿ ಮಾತಾಡಿದನು.

ಇನ್ನು ಪತಿರಾಜರು ಸಿಟ್ಟಾದರು. ಇನ್ನು ಹಚ್ಚಿಗ ಬಗಿ ಯಡಿಯುವದು ಒಳಿತಲ್ಲವೆಂದು ಭಾವಿಸಿ, ಮೀನಾಕ್ಷಿಯು ಕೋಮಲವಾದ ಸ್ವರದಿಂದ ''ಇದೇನು ನನಗೆ ಗೊತ್ತಿಲ್ಲದ ಮಾತೇ? ಅಂತೆಯೇ ನನಗೆ ಇಷ್ಟೊಂದು ಆಶ್ಚರ್ಯವಾಗಿದೆ. ರಂಗಮ್ಮನಿಗೂ ಸಹ ನಾನು ಇದೇ ಮಾತನ್ನೇ ಹೇಳಿರುವೆನು—''

''ಆ ರಮಣೀಮಣಿಯು ನಿನಗೆ ಅದಾವ ಗುಪಿತವನ್ನು ಹೇಳಿರುವಳು?''

''ಅದನ್ನೇ ಹೇಳುವೆನು ಕೇಳಿರಿ. ಇಷ್ಟರಲ್ಲಿಯೇ ನಿಮ್ಮದೂ ರಂಗಮ್ಮನ ಗಂಡನದೂ ಭೆಟ್ಟಿಯಾದದ್ದು ನಿಜವೇ?''

''ಯಾರದು-ಮಹದಣ್ಣನದೆ? ಹೌದು. ನಿನ್ನೆಯೇ ವೆಂಕಟಸ್ವಾಮಿಯ ದೇವಾಲಯದ ಹತ್ತರದಲ್ಲಿರುವ ಮಾವಿನ ತೋಪಿನಲ್ಲಿ ಅವನ ಭೆಟ್ಟಿಯಾಗಿತ್ತು. ತಂಬಾಕವನ್ನು ಸೇದುತ್ತ ಒಂದು ಗಳಿಗೆಯವರಗ ಕುಳಿತಿದ್ದದು ನಿಜವು; ಆದರೆ ನಾನಂತೂ ಅವನ ಎದುರಿಗೆ ಯಾವ ಗುಪಿತವನ್ನೂ ಹೇಳಲಿಲ್ಲವು ಇಲ್ಲವೇ ಇಲ್ಲದ ಮೇಲೆ ಹೇಳುವದಾದರೂ ಎಲ್ಲಿಂದ?''

ಉದ್ವಿಗ್ನಸ್ವರದಿಂದ ಮೀನಾಕ್ಷಿಯು: "ರಂಗಾವ್ಮನು ನನಗೆ ಹೇಳಿದಳು. ಏನೆಂದರೆ....ಏನೆಂದರೆ...."ಎಂದು ಮಾತಾಡಿ ಮಧ್ಯದಲ್ಲಿಯೇ ತಡೆದುಬಿಟ್ಟಳು. ಅವಳಿಂದ ಮುಂದೆ ಮಾತಾಡುವದಾಗಲೊಲ್ಲದು.

ಪ್ರಶ್ನಸೂಚಕ ಮುದ್ರೆಯಿಂದ ಧನಪತಿಯು ಅವಳ ಕಡೆಗೆ ಟಕಮಕ ವಾಗಿ ನೋಡಹತ್ತಿದನು.

ಕ್ಷಣಾಂತರದಲ್ಲಿ ಮೀನಾಕ್ಷಿಯು. "ನೀವು ಈ ನಿಮ್ಮ ದೇವಾಚಲವನ್ನು ಬಿಟ್ಟುಕೊಟ್ಟು ಶೀಘ್ರದಲ್ಲಿಯೇ ವಿಜಯನಗರದ ಕಡೆಗೆ ಹೋಗುವವರಿರುವಿರಂತೆ! ಈ ಮಾತನ್ನು ನೀವು ಮಹದಣ್ಣನ ಮುಂದೆ ಹೇಳಿಲ್ಲವೇ?" ಎಂದು ಸ್ಪಷ್ಟವಾಗಿ ಪ್ರಶ್ನೆ ಮಾಡಿದಳು.

ಧನಪತಿಯ ಮೋರೆಯು ಕಪ್ಪಿಟ್ಟಿತು. ಅವನು ಸುಮ್ಮನಾಗಿ ಏನೂ ಮಾತಾಡಲಿಲ್ಲ. ಕೆಲವು ಕ್ಷಣಗಳ ವರೆಗೆ ಸುಮ್ಮನಿದ್ದು ಬಳಿಕ ಮೀನಾಕ್ಷಿಯು ತೀವ್ರಸ್ವರದಿಂದ. ಈಗೇಕೆ ಮಾತಾಡಲೊಲ್ಲಿರಿ? ಬಾಯಿಗೆ ಬೀಗ-ಮುದ್ರೆ ಏಕೆ? ನಿಮ್ಮದೇನೂ ಗುಪ್ತವಿಲ್ಲವಷ್ಟೇ? ನೀವು ಯಾವ ಮಾತನ್ನೂ ಗುಪ್ತವಾಗಿ ಇಡತಕ್ಕವರಲ್ಲವಷ್ಟೇ! ಇದು ಗುಪಿತವಲ್ಲದೆ ಮತ್ತೇನು? ಇದು ಗುಪಿತದ ಅಜ್ಜ! ಯಾಕೆ ಪತಿರಾಯರೇ, ಮಾತಾಡಿರಿ ಸ್ತ್ರೀಯರಿಗೆ ಯೋಗ್ಯವಾದ ಮೌನಗೌರಿಯವ್ರತವನ್ನೇಕೆ ಧರಿಸಿರುತ್ತೀರಿ? ಎಂದು ಆತನ ಮನಸ್ಸಿಗೆ ನಸುವಂತೆ ಅಂದಳು.

ಈಗ ಏನಾದರೂ ಮಾತಾಡುವದು ಬಹು ಅವಶ್ಯಕವಾದದ್ದೆಂದು ಬಗೆದು ಧನಪತಿಯು ಆ ಮಾತಿನ ಗರ್ಭಿತಾರ್ಥವನ್ನು ನುಂಗಿಕೊಂಡು. "ಇದು ನೋಡು ಮೀನಾ, ಇದು!........ಹೀಗೆ........"ಎಂದು ಮಾತಾಡಲುಪಕ್ರಮಿಸಿದನು. ಅಷ್ಟರಲ್ಲಿಯೆ ಮೀನಾಕ್ಷಿಯು ನಡುವೇ ಬಾಯಿ ಹಾಕಿ. "ಇದು ನೋಡು.... ಮೀನಾ!" ಎಂದು ಹೀಗ ತಡವರಿಸುವದೇಕೆ? ದಯಮಾಡಿ ಸ್ಪಷ್ಟವಾಗಿ ಹೇಳಿರಿ. ನೀವು ನಿನ್ನಿನ ದಿನ ರಂಗಮ್ಮನ ಗಂಡನ ಮುಂದೆ ಈ ರೀತಿ ಹೇಳಿದಿರೋ-ಇಲ್ಲವೋ? ದಯಮಾಡಿ ನಿಜವಾದದ್ದನ್ನೇ ನುಡಿಯಿರಿ" ಎಂದು ಮಾತಾಡಿದಳು.

ಧನಪತಿಯು ಇಷ್ಟರಲ್ಲಿ ಸ್ವಲ್ಪ ಸುಧಾರಿಸಿಕೊಂಡು ಸ್ಪಷ್ಟರೀತಿಯಿಂದ: "ಅಹುದು. ನಿನ್ನೆ ಹೀಗೆ ಮಹದಣ್ಣನ ಮುಂದೆ ಅಂದದ್ದೇನೋ ನಿಜ-"ಎನ್ನಲು ಮಧ್ಯದಲ್ಲಿಯೇ ಮೀನಾಕ್ಷಿಯು "ಶಿವ! ಶಿವ!! ಅಂತೂ ಈ ಸಂಗತಿಯು ನಿಜವಾದದ್ದೇ ಸರಿ! ನೀವು ಹೋಗತಕ್ಕವರು, ನನ್ನನ್ನು ಬಿಟ್ಟುಗೊಟ್ಟು ಹೋಗತಕ್ಕವರು!" ಎಂದು ದುಃಖದಿಂದ ಉಸಿಗರೆಯಹತ್ತಿದಳು, ಅವಳ ರಾಟಿಯ ಗತಿಯು ಎಂದೋ ನಿಂತು ಹೋಗಿತ್ತು.

ಪ್ರಿಯಪತ್ನಿಯು ಉಸಿರ್ಗರೆದುದನ್ನು ನೋಡಿ ಪಾಪ! ಧನಪತಿಯು ಮತ್ತಿಷ್ಟು ಗೊಂದಲದಲ್ಲಿ ಬಿದ್ದನು. ಕರ್ತವ್ಯಮೂಢನಾದನು. ಆತನು ಲಗುಬಗೆಯಿಂದ ಮೀನಾಕ್ಷಿಯ ತೀರ ಸಮೀಪಕ್ಕೆ ಹೋಗಿ ತನ್ನ ಉಟ್ಟ ದೋತರದ ತುದಿಯಿಂದ ಅವಳ ಕಣ್ಣೀರನ್ನೊರಸಿ, ಅವಳನ್ನು ಸಮಾಧಾನಪಡಿಸತೊಡಗಿದನು. ಧನಪತಿಯು ತನ್ನ ಪ್ರಾಣಪಗಕಳಾದ ಮೀನಾಕ್ಷಿಯ ಮನಸ್ಸನ್ನು ಸಮಾಧಾನಗೊಳಿಸುವ ಅವಧಿಯಲ್ಲಿ ನಮ್ಮ ಪ್ರಿಯವಾಚಕರಿಗೆ ಆ ಪ್ರೇಮಲ ದಂಪತಿಗಳ ಪೂರ್ವ ಪರಿಚಯವನ್ನಿಷ್ಟು ಮಾಡಿಕೊಡುವದು ಉಚಿತವಾಗಿದೆ.

ವಿಜಯನಗರದಿಂದ ಬಹು ದೂರದಲ್ಲಿ ತುಂಗಾಭದ್ರೆಯ ದಕ್ಷಿಣತೀರದಲ್ಲಿ ದೇವಾಚಲವೆಂಬದೊಂದು ಸಣ್ಣಗ್ರಾಮವಿತ್ತು. ಆ ಹಳ್ಳಿಯಲ್ಲಿ ಮುಖ್ಯ ಜನವಸತಿಯಿಂದ ಕೆಲವು ಅಂತರದ ಮೇಲೆ ಷಣ್ಮುಖನೆಂಬ ಹೆಸರಿನ ಒಬ್ಬ ನೇಕಾರನು ವಾಸಮಾಡಿಕೊಂಡಿದ್ದನು. ಆ ಬಡ ಷಣ್ಮುಖನ ಯಾವತ್ತು ಆಯುಷ್ಯವು ದಾರುಣವಾದ ದಾರಿದ್ರ್ಯಪಂಕದಲ್ಲಿ ತೊಳಲಾಡುವದರಲ್ಲಿಯೇ ಕಳೆದು ಹೋಯಿತು. ಅವನಿಗೆ ಅನೇಕ ಮಕ್ಕಳಾದವು. ಆದರೆ ಕಡೆಗೆ ಉಳಿದವನು ಒಬ್ಬನೇ. ಅವನೇ ನಮ್ಮ ಕಥಾನಕದ ಧನಪತಿಯು.

'ತಾನೊಂದು ಬಗೆದರೆ ದೈವವೊಂದು ಬಗೆಯಿತು' ಎಂಬ ಗಾದೆಯ ಮಾತು ಸುಳ್ಳಲ್ಲ. ಈ ಮಾತಿನ ಸತ್ಯತೆಯು ಈ ಲೋಕದಲ್ಲಿ ಹೆಜ್ಜೆ-ಹೆಜ್ಜೆಗೆ ಕಂಡು ಬರುತ್ತದೆ. ಹೆಸರಿಗೆ ಹಾಲಪ್ಪ ಕುಡಿಯಲಿಕ್ಕೆ ಮಜ್ಜಿಗೆ ಸಹ ಇಲ್ಲ, ಎಂಬ ನಾಣ್ಣುಡಿಯಂತೆ ಅಸಾಧ್ಯವಾದ ಬಡತನದಿಂದ ಸಂಸಾರದಲ್ಲಿ ಬದ್ಧಾಡಿ, ಪೇಚಾಡಿದ ಷಣ್ಮುಖನೂ ಅವನ ಹೆಂಡತಿಯೂ ಈ ತಮ್ಮ ಕಡೆಹುಟ್ಟಿದ ಹುಡುಗನಿಗೆ ಧನಪತಿಯೆಂದು ಹೆಸರಿಟ್ಟರು. ಈ ನಾಮಕರಣವನ್ನು ತನ್ನ ಹುಡುಗನಿಗೆ ಮಾಡುವಾಗ ಷಣ್ಮುಖನ ಮನಸ್ಸಿನಲ್ಲಿ ಅನೇಕ ಆಶಾಜನಕ ವಿಚಾರಗಳು ಹುಟ್ಟಿದವು! ಮಗನ ಈ ಹೆಸರಿನಿಂದಾದರೂ ಪ್ರೀತನಾಗಿ, ಧನಪತಿಯು-ವೆಂಕಟಸ್ವಾಮಿಯು-ತನ್ನ ವಂಶದ ಮೇಲೆ ಕೃಪಾದೃಷ್ಟಿಯನ್ನಿರಿಸುವನೆಂದು ನೆರೆನಂಬಿದ್ದನು, ಆದರೆ ದರಿದ್ರನ ಮನೋರಥಗಳು ಎಂದಾದರೂ ಪೂರ್ಣವಾಗುವವೇ? ವೆಂಕಟಸ್ವಾಮಿಯಾಗಲಿ ಇಲ್ಲವೆ ಬೇರೆ ದೇವರಾಗಲಿ ಷಣ್ಮುಖನ ಪ್ರಾರ್ಥನೆಗಳಿಗೆ ಲಕ್ಷ್ಯಗೊಡಲಿಲ್ಲ. ಮುಂಡುಪಿನ ಲಂಚಕ್ಕೆ ಮನವೊಲಿಯಲಿಲ್ಲ! ನಿಜವಾದ ಧನಪತಿಯು ಈ ದರಿದ್ರನಾದ ಧನಪತಿಯ ಕಡೆಗೆ ವಕ್ರದೃಷ್ಟಿಯಿಂದ ನೋಡತೊಡಗಿದನು, ಮತ್ತು ಅವನ ಮೇಲೆ ಕನಕಾಭಿಷೇಕವನ್ನು ಮಾಡುವುದರ

ಒದಲು, ಸಂಕಟಗಳ ಹಾಗು ಬಡತನದ ದಾರುಣವಾದ ಯಾತನೆಗಳ ಮಳೆ ಯನ್ನು ಮಾತ್ರ ಯಥೇಚ್ಛವಾಗಿ ಸುರಿಸಿ, ಆ ಧನಪತಿಯನ್ನು ಮೊದಲಿನಿಂದ ಕಡೆತನಕ ದಾರಿದ್ರ್ಯದ ದರಿಯಲ್ಲಿಯೇ ದೂಡಿದನು!

ಸಾಂಪತ್ತಿಕ ಸ್ಥಿತಿಯು ಹೇಗೇ ಇರಲಿ, ನಮ್ಮ ಹಿಂದೂಜನರಲ್ಲಿ ಸಾಮಾನ್ಯವಾಗಿ ಸ್ತ್ರೀ ಪುರುಷರ ಲಗ್ನವಾಗದೆ ಇರುವದಿಲ್ಲ ಷಣ್ಮುಖನು ಜೀವಂತ ನಿರುವಾಗಲೇ ಧನಪತಿಯು ಲಗ್ನವನ್ನು ನೆರವೇರಿಸಿ ತಾನೂ ತನ್ನ ಹೆಂಡತಿಯೂ ತಮ್ಮ ಮುಪ್ಪಿನ ಕಾಲದಲ್ಲ ಸೊಸೆಯ ಮೋರೆಯನ್ನು ನೋಡಿ, ಆ ತರುಣ ದಂಪತಿಗಳ ಕೌತುಕವನ್ನು ಮಾಡುತ್ತ ಧನ್ಯ-ಧನ್ಯರಾಗಿದ್ದರು. ಮೀನಾಕ್ಷಿಯು ಷಣ್ಮುಖನ ಪುತ್ರನ ಮಗಳು

ದಾರಿದ್ರ್ಯದ ಯಾತನೆಗಳನ್ನು ಅನುಭೋಗಿಸುತ್ತಲೇ ಕಾಲಗತಿಯಿಂದ ಆ ವೃದ್ಧ ದಂಪತಿಗಳು ಕಾಲವಶರಾದರು. ಸಂಸಾರದ ಯಾವತ್ತೂ ಭಾರವು ಆ ನವದಂಪತಿಗಳ ಮೇಲೆ ಬಿದ್ದಿತು. ಇವರಿಬ್ಬರೂ ಜನ್ಮ-ದರಿದ್ರರೇ, ಆದರೆ ಆ ಉಭಯತರಲ್ಲಿ ಬಳ್ಳೇ ಗಾಢವಾದ ಪ್ರೇಮವಿದ್ದಿತು ಅವರಿಗ ಆ ಪ್ರೇಮದ ಬಲದಿಂದ ದಾರಿದ್ರ್ಯದ ದುಃಖಗಳು ತಮ್ಮ ಯಾತನಾಮಯ ಕಂಟಕಗಳಿಂದ ಸ್ಪರ್ಶಮಾಡಲು ಸಮರ್ಥವಿರಲಿಲ್ಲ ಅವರೀರ್ವರ ನಡುವಿನ ಪ್ರೇಮವು ಅದ್ವಿತೀಯವಾದದ್ದು. ಅವರು ಏಕ-ಜೀವರೂ, ಏಕ-ಮನಸ್ಕರೂ, ಬನ್ನ ದೇಹಿಗಳಾಗಿದ್ದರೂ ಏಕದೇಹರೂ ಆಗಿದ್ದರು. ಆ ಏಕೀಕರಣದ ಸೂತ್ರವೇ ಅವರೀರ್ವರಲ್ಲಿದ್ದ ಅನುಪಮ ಪ್ರೇಮವು! ಆ ನಿಜಪ್ರೇಮೋಪಾಸಕರೇ ಧನ್ಯರು! ಮಾನ್ಯರು!! ಆ ಪ್ರೇಮಾಮೃತವೇ ಸರ್ವದುಃಖ ನಿವಾರಣವು ಇರಲಿ.

ಮೀನಾಕ್ಷಿಯು ಮನೆಯ ಕೆಲಸಗಳನ್ನು ತೀರಿಸಿಕೊಂಡು, ಉಳಿದ ಆರಾಮದ ವೇಳೆಯಲ್ಲಿ ರಾಟಿಯ ಮೇಲಿಂದ ನೂಲು ತೆಗೆಯುತ್ತಿದ್ದಳು. ಧನಪತಿಯು ಅವುಗಳಿಂದ ಉರುಟಾದ ಅರಿವೆಗಳನ್ನು ನೇಯ್ದು ಪೇಟೆಗೆ ಒಯ್ದು ಮಾರಾಟ ಮಾಡುತ್ತಿದ್ದನು. ಬಂದ ದುಡ್ಡಿನಿಂದ ಹಾಗು ಪ್ರಸಂಗವಿಶೇಷದಲ್ಲಿ ಅಲ್ಪ-ಸ್ವಲ್ಪ ಸಾಲಮಾಡಿ, ಅಂತೂ ಇಂತೂ ಸಂಸಾರೋಪಯೋಗಿ ಪದಾರ್ಥಗಳನ್ನು ಕೊಂಡುಕೊಂಡು ತಮ್ಮಿಬ್ಬರ ಎರಡೂ ಹೊತ್ತಿನ ಊಟಮಾಡಿ ಕಾಲ ಕ್ರಮಿಸುತ್ತಿದ್ದರು. ಕೆಲವು ದಿನ ಅವರು ಒಂದೇ ಹೊತ್ತು ಸಹ ಊಟ ಮಾಡಿ ಕಾಲಕಳೆಯಬೇಕಾಗುತ್ತಿತ್ತು. ಆಗ ಅವರು ತಮ್ಮ ಪರಸ್ಪರರಲ್ಲಿದ್ದ ಪ್ರೇಮಾಧಾರದ ಮೇಲೆ ಹಸಿವೆಯನ್ನು ಹಿಂಗಿಸಬೇಕಾಗುತ್ತಿತ್ತು. ಅವರ ಉದ್ಯೋ

ಗವು ಸೇಕಾರರದೇ ಆದದ್ದರಿಂದ ಹಾಗೂ-ಹೀಗೂ ಅವರ ಉಪಜೀವನವು ಸಾಗು ತ್ತಿತ್ತು. ಅವನ ಹಿರಿಯರು ಅವನಿಗೆ ಬಿಟ್ಟುಹೋದ ಆಸ್ತಿಯೆಂದರೆ (೧) ಸಾವು ಕಾರರ ಸಾಲ (೨) ಒಂದು ಚಂದ್ರಮೌಳಿಯಾದ ಚಪ್ಪರ. ಇವುಗಳ ಹೊರತು ಬೇರೆ ಏನೂ ಇರಲಿಲ್ಲ. ಆ ಚಪ್ಪರವಂತೂ ತೀರ ಮುರಕಳಿಗೆ ಬಂದಿತ್ತು. ಈ ಚಪ್ಪರದಲ್ಲಿ ಅವರೀರ್ವರು ಹಾಗು-ಹೀಗೂ ಬೇಸಿಗೆ ಚಳಿಗಾಲಗಳನ್ನು ಕಳೆಯು ತ್ತಿದ್ದರು, ಆದರೆ ಮಳೆಗಾಲದಲ್ಲಿ ಮಾತ್ರ ಅವರ ದುಃಖಕ್ಕೆ ಎಣೆಯೇ ಇರಲಿಲ್ಲ. ಆ ದುಃಖವನ್ನು ಅವರೇ ಬಲ್ಲರು! ಆಗ ಚಪ್ಪರದಲ್ಲೆಲ್ಲ ನೀರೇ ನೀರಾಗುತ್ತಿತ್ತು. ಅಂಥ ಪ್ರಸಂಗದಲ್ಲಿ ಆ ಚಪ್ಪರದ ಯಾವದೊಂದು ಚಾಟಿನ ಮೂಲೆಯಲ್ಲಿ ಒಬ್ಬರಿ ಗೊಬ್ಬರು ಹೊಂದಿಕೊಂಡು ಕುಳಿತು ಮಧುರವಾದ ಪ್ರೇಮಾಲಾಪದಲ್ಲಿ ಇಡಿ ರಾತ್ರಿಯನ್ನು ಕಳೆಯುತ್ತಿದ್ದರು ಪರಸ್ಪರರ ಬಾಹುಬಂಧನದಲ್ಲಿ ಸರಸ-ಪ್ರೇಮಗೋಷ್ಠಿಗಳನ್ನಾಡುತ್ತ ಅತ್ಯಂತ ಸುಖದಾಯಕ ನಿದ್ರಾವಶರಾಗುತ್ತಿದ್ದರು. ಆ ನಿದ್ರೆಯು ಎಂಥ ಗಾಢನಿದ್ರೆಯು? ಎಷ್ಟು ಸುಖಕರವು! ಎಷ್ಟು ಮೋಹ ಕರವು! ಅದನ್ನು ಲಭಿಸಿದವರು ಎಷ್ಟು ಭಾಗ್ಯಶಾಲಿಗಳು! ಅಹಹಾ! ಅತ್ಯಂತ ವೈಭ ವಶಾಲಿ ಮಹಾರಾಜ ಮಹಾರಾಜ್ಞಿಯರಿಗೆ ಕೂಡ ಆ ಸೊಬಗಿನ ನಿದ್ರೆಹತ್ತು ತ್ತಿರಬಹುದೇ? ಛೇ! ಛೇ!! ಶಕ್ಯವಿಲ್ಲ.

ಒಂದೊಂದು ದಿನ ವಿಪರೀತ ಪ್ರಸಂಗದಿಂದ-ಸಾವುಕಾರರ ಒತ್ತಾಯ ದಿಂದ ಆ ದಂಪತಿಗಳಿಗೆ ಮನೆಯಲ್ಲಿ ಒಂದು ಮುಷ್ಟಿ ಹಿಟ್ಟಾಗಲಿ ಇಲ್ಲವೆ ಬೇರೆ ಧಾನ್ಯವಾಗಲಿ ಇರುತ್ತಿರಲಿಲ್ಲ! ಇಂಥ ವಿಷಮ ಪ್ರಸಂಗದಲ್ಲಿ ಸಹ ಅವರ ಆನಂ ದವು ಲೋಪವಾಗುತ್ತಿರಲಿಲ್ಲ. ಪರಸ್ಪರ ಪ್ರೇಮದಲ್ಲಿ ಅವರು ಇಂಥ ವೇಳೆಯನ್ನು ಆನಂದದಿಂದ ಕಳೆಯುತ್ತಿದ್ದರು ಆಗ ಧನಪತಿಯು ತನ್ನ ಏಕನಾಧವನ್ನು ತೆಗೆಯುತ್ತಿದ್ದನು ಮೀನಾಕ್ಷಿಯು ತನ್ನ ಮಧುರ ಗಾಯನದಿಂದ ಅವನಿಗೆ ಸಹಾಯವಾಡುತ್ತಿದ್ದಳು ಸ್ವರ್ಗೀಯ ಪ್ರೇಮದ ವಿಶಾಲವಾದ ಸರೋವರದಲ್ಲಿ ಈ ರೀತಿಯಿಂದ ಸ್ವೇಚ್ಛೆಯಿಂದ ಪ್ರೀತಿಸುತ್ತಿರಲು ಆ ತರುಣದಂಪತಿಗಳಿಗೆ ನೈಸ ರ್ಗಿಕ ಶಾರೀರಕ ಕ್ಷುಧಾ ಪಿಪಾಸೆಗಳ ಬಾಧೆಯಾಗುತ್ತಿರಬಹುದು, ಆದರೆ "ನನಗೆ ಚಲೋ ಸೀರೆಗಳು ಬೇಕು ಬಳೆ-ಬಂಕಿಗಳು ಬೇಕು. ಅದು ಇಲ್ಲ, ಇದು ಬೇಕು. ಇದು ಇಲ್ಲ, ಅದು ಬೇಕು" ಎಂಬ ಕ್ಷುದ್ರಭಾವನೆಗಳು ಅವರ ಪ್ರೇಮದ ಪರಮಾನಂದಕ್ಕೆ ಎಳ್ಳಷ್ಟಾದರೂ ಕುಂದು-ಕೊರತೆಯನ್ನು ತರಬಲ್ಲವೆ?

ಅತ್ತನೋಡಿರಿ ಕಣ್ಣುಗಳಲ್ಲಿಯ ನೀರನ್ನು ಒರಸಿಕೊಂಡು ಮೀನಾ ಕ್ಷಿಯು "ನಿಜವೇ?" ಎಂದು ಕೇಳಿದಳು.

"ಸತ್ಯವು ಸತ್ಯವು; ನಿನ್ನ ಕೊರಳಾಣೆಯೂ ಸತ್ಯವು." ಧನಪತಿಯು ಆವೇಶದಿಂದ ಮಾತಾಡಲುಪಕ್ರಮಿಸಿದನು. "ಮೀನಾ, ಈ ವರೆಗೂ ಯಾವ ಮಾತನ್ನಾದರೂ ಮುಚ್ಚಿಟ್ಟಿರುವೆನೆ? ನಿನ್ನ ಕಷ್ಟವನ್ನು ನೋಡಲಾರದೆ ಈಗ ಎಷ್ಟೋ ದಿನಗಳಿಂದ ನನ್ನ ಮನಸ್ಸಿನಲ್ಲಿ ತಲೆಯುತ್ತಿದ್ದ ಈ ವಿಚಾರವನ್ನು ಏನೋ ಸಹಜವಾಗಿ ನಿನ್ನಿನ ದಿನ ಮುಹದಣ್ಣನ ಮುಂದೆ ಆಡಿ ತೋರಿಸಿದೆನು. ವಿಜಯನಗರವು ಈಗಿನ ಕಾಲದಲ್ಲಿ ಜಗತ್ತಿನಲ್ಲಿಯ ದೊಡ್ಡಪಟ್ಟಣಗಳಲ್ಲೊಂದಾಗಿದೆ. ದೊಡ್ಡ ರಾಜಧಾನಿಯ ನಗರವು ಅಲ್ಲಿ ನನ್ನಂಥ ಕಸಬುದಾರನ ಗುಣ-ಗೌರವಕ್ಕೆ ಆಸ್ಪದವು ದೊರೆತು, ಒಳ್ಳೇ ಸಂಪಾದನೆಯಿಂದ ಸಾಲಗಳ ಜಂಜಾಟದಿಂದ ಮುಕ್ತನಾಗಿ ಸುಖದಿಂದ ಜೀವನ ಯಾತ್ರೆಯನ್ನು ಸಾಗಿಸಲಿಕ್ಕೆ ಅನುಕೂಲವಾಗುವದೆಂಬ ವಿಚಾರವೇನೋ ನನ್ನ ತಲೆಯಲ್ಲಿ ಹುಟ್ಟಿ ಬೆಳೆಯಹತ್ತಿದ್ದುದು ಸತ್ಯವು. ಮೀನಾ, ಪ್ರೇಮಲೇ, ವೆಂಕಟಸ್ವಾಮಿಯ ಆಣೆಮಾಡಿ ಹೇಳುತ್ತೇನೆ, ನನ್ನ ಸ್ವಂತದ ಸ್ಥಿತಿಯ ಬಗ್ಗೆ ನನಗೆ ಏನೂ ಅನಿಸುವದಿಲ್ಲ, ಆದರೆ ನಿನ್ನಂಥ ಮೃದು-ಮಧುರ ಕುಸುಮವು ದಾರಿದ್ರ್ಯದ ಈ ದಾರುಣವಾದ ಜ್ವಾಲೆಯಲ್ಲಿ ಸುಟ್ಟು-ಸೂರೆಗೊಳ್ಳುವದನ್ನು ನಾನು ನೋಡಲಾರೆನು! ಈ ವರೆಗೆ ನೀನು ಅನುಭವಿಸಿದ ಭಯಂಕರ ಯಾತನೆಗಳ ನೆನಪಾದರೆ ಮೈಮೇಲಿನ ಕೂದಲುಗಳು ನೆಟ್ಟಗಾಗುತ್ತವೆ. ಇಷ್ಟು ಸಾಕು! ಕಾರಣ ಈ ದುಃಖನಿವಾರಣೆಯ ಉಪಾಯವೆಂದು ಖಿನ್ನಮನಸ್ಸಿನಿಂದ ನನ್ನ ಇಚ್ಛೆಗೆ ವಿರುದ್ಧವಾಗಿ ವಿಜಯನಗರಿಯ ಪ್ರಯಾಣದ ವಿಷಯಕ್ಕೆ ಯೋಚಿಸಿದ್ದೇನೋ ನಿಜವು"

"ಆದರೆ ಹೋಗತಕ್ಕವರು ನೀವೊಬ್ಬರೇ ಅಲ್ಲವೆ?" ಎಂದು ಮೀನಾಕ್ಷಿಯು ಗಲ್ಲಗಳನ್ನು ಉಬ್ಬಿಸಿ ಪ್ರಶ್ನೆ ಮಾಡಿದಳು.

ಅವಳ ಗಲ್ಲದ ಮೇಲೆ ಮೆಲ್ಲನೆ ಒಮ್ಮೆ ಹಸ್ತಸ್ಪರ್ಶ ಮಾಡಿ "ಹುಚ್ಚೀ, ಮೊದಲಿಗೇ ನಾವಿಬ್ಬರೂ ಕೂಡಿ ಆ ದೊಡ್ಡ ಪಟ್ಟಣಕ್ಕೆ ಹೇಗೆ ಹೋಗುವದು?"

"ಕೂಡಿ ಹೋಗಲು ಯಾಕೆ ಬರುವದಿಲ್ಲ?"

"ದಡ್ಡಿ, ವಿಜಯನಗರವೆಂದರ ನಮ್ಮ ದೇವಾಚಲವೆಂದು ತಿಳಿದಿಯೇನು? ಅಲ್ಲಿ ನಾವು ವಾಸಮಾಡಿಕೊಂಡಿರುವುದೆತ್ತ? ತಿನ್ನುವದೇನು? ಆ ವಿಸ್ತೀರ್ಣವಾದ ನಗರದಲ್ಲಿ ನಮ್ಮನ್ನು ಕೇಳುವವರಾರು? ಹುಚ್ಚೀ, ಅಲ್ಲಿ ನನ್ನ ಉದ್ಯೋಗವು ನಡೆಯಹತ್ತಿದರೆ, ನಾನು ಕಾಲೂರಿ ನಿಂತೆನೆಂದರೆ, ಅಲ್ಲಿಗೆ ನನ್ನ ಪಂಚಪ್ರಾಣವನ್ನು ಕರೆದುಕೊಂಡು ಹೋಗದೆ ಕೆಲವು ಕ್ಷಣಗಳನ್ನಾದರೂ ಕಳೆಯಬಲ್ಲೆನೇ?"

ಮೀನಾಕ್ಷಿಯು ಕ್ಷಣಹೊತ್ತು ಸುಮ್ಮನಿದ್ದು ಮತ್ತೆ "ಹೀಗೋ? ಹಾಗಾದರೆ ನೀವು ವಿಜಯನಗರಕ್ಕೆ ಹೋಗುವದು ನಿಶ್ಚಯವೇ?"

ಧನಪತಿಯು ನೆಲದ ಕಡೆಗೆ ನೋಡುತ್ತ: "ಅಹುದು. ವಿಜಯನಗರಿಗೆ ಹೋಗಬೇಕಾಗಿದೆ. ಇಂದೇ ಅಲ್ಲ, ನಾಲ್ಕೆಂಟು ದಿನಗಳ ಮೇಲೆ ಹೋಗುವ ವಿಚಾರವಿದೆ, ಇದೆಲ್ಲವೂ ನಿನ್ನ ದಯೆಯಿಂದಲೇ, ತಿಳಿಯಿತೇ? ಅಲ್ಲಿಗೆ ಹೋಗಿ ದಾರಿದ್ರ್ಯ ನಿವಾರಣವಾಗುವಂತೆ ಉದ್ಯೋಗಮಾಡಿ ನಿನ್ನ ಸುಖಕ್ಕಾಗಿ-ನಿನ್ನ ಬಯಕೆಗಳನ್ನು ಪೂರೈಸಲಿಕ್ಕೆ ಸಮರ್ಥನಾಗಲಿಕ್ಕೆ ಈ ತಾತ್ಪೂರ್ತಿಕ ವಿಯೋಗ ದುಃಖವನ್ನು ಸಹಿಸು ಮನಸ್ಸುಗಟ್ಟಿಮಾಡುವ ಪ್ರಸಂಗ ಬಂದದೆ!"ಎಂದು ನುಡಿದನು.

ಮೀನಾಕ್ಷಿಯು ಕೂಡಲೆ ಕುಳಿತ ಸ್ಥಳದಿಂದ ಎದ್ದು ಪತಿಯ ಕೊರಳಿಗೆ ತನ್ನ ಎರಡೂ ಬಾಹುಗಳಿಂದ ಬಿಗಿದು "ಬೇಡ, ಬೇಡ. ದಯಮಾಡಿ ನನ್ನ ದೆಶೆಯಿಂದ ನಗರವಾಸ ಮಾಡುವದು ಏನೂ ಕಾರಣವಿಲ್ಲ. ಎಂದಾದರೂ ಒಮ್ಮೆ ಸಹ ನಾನು ನಮ್ಮ ಬಡತನದ ದೆಶೆಯಿಂದಾಗಲಿ, ನಮ್ಮ ದೀನಸ್ಥಿತಿಯ ವಿಷಯವಾಗಲಿ ಸಿಟ್ಟಿಂದು ಆಡಿರುವೆನೇ? ಹಾಗೆ ಆಡುವದೆಂತು? ಬಡತನದ ದುಃಖವೇ ನನ್ನ ಮನಸ್ಸಿಗೆ ನೋಂಕುವ ಹಾಗಿಲ್ಲ. ನಿಮ್ಮ ಸಹವಾಸ ಸುಖವೇ ನನ್ನ ಸರ್ವಸ್ವವು! ೦ ಸುಂದ ಮುಂದೆ ಪ್ರತ್ಯಕ್ಷ ಮಹಾರಾಜ್ಞಿಯಾಗಿ ಅನುಭೋಗಿಸುವ ಸುಖ-ವಿಲಾಸಗಳನ್ನು ನೀವಾಳಿಸಿ ಒಗೆಯಬಹುದು; ಅವು ನಿಜವಾಗಿಯೂ ತುಚ್ಛವಾದವುಗಳು! ಈ ಮುರುಕ ಚಪ್ಪರವೇ ನಿಮ್ಮ ಪವಿತ್ರ ಸಾನ್ನಿಧ್ಯದ ಮಹಾತ್ಮೆಯ ಮೂಲಕವಾಗಿ ನನಗೆ ಸ್ವರ್ಗೀಯ ನಂದನವನವಾಗಿ ಪರಿಣಮಿಸಿದೆ!"

ಮೀನಾಕ್ಷಿಯು ಮುಂದೆ ಮಾತಾಡತೊಡಗಿದಳು "ನಮಗೆ ಏನು ಕಡಿಮೆಯಾಗಿದೆ? ಯಾರಿಗೂ ಘಾತ-ಪಾತ ಮಾಡದೆ, ಹಿಂಸಿಸದೆ, ನಾವು ತಿನ್ನುವ ರೊಟ್ಟಿ ನುಚ್ಚಿನ ರುಚಿಯು ಪಾತಕಿ ಶ್ರೀಮಂತಿಕೆಯ ಷಡ್ರಸಾನ್ನಕ್ಕೆ ಎಂದಿಗೂ ಬಾರದು ಪಟ್ಟಣಗಳೆಂದರೆ ಪಾಪಗಳ-ಹೊಲಸಿನ ತವರುಮನೆಯು. ಅಲ್ಲಿ ಒಂದು ದಿವಸ ವಾಸ ಮಾಡಿದರೂ ಸಾಕು. ಅಲ್ಲಿಯ ದೂಷಿತ ಹವೆಯು ಮನುಷ್ಯನ ವೃತ್ತಿಯಲ್ಲಿ ಘಾತುಕಪ್ರವೃತ್ತಿಯನ್ನು ಹುಟ್ಟಿಸದೆ ಬಿಡದು ಈ ಸಂಗತಿಯು ನಿಮಗೆ ತಿಳಿಯದ ಮಾತೇ? ಬೇಡ, ಶಹರ ವಾಸವು ಬೇಡ. ನಾನು ನಿಮ್ಮನ್ನು ಪಟ್ಟಣಕ್ಕೆ ಹೋಗಗೊಡುವದಿಲ್ಲ. ನನಗೆ ಶ್ರೀಮಂತಿಕೆಯ ಮೇಲೆ ಇಚ್ಛೆಯಿಲ್ಲ ಇದ್ದ ಈ ಸ್ಥಿತಿಯಲ್ಲಿಯೇ ನನಗೆ ಸ್ವರ್ಗದ ಸುಖಕ್ಕಿಂತಲೂ ಅಧಿಕ ಸುಖವೆನಿಸುತ್ತದೆ. ಹಿರಿಯರ ಅಲ್ಪ-ಸ್ವಲ್ಪ ಸಾಲವಿರುವದೇನೋ ನಿಜ;

ಆದರೆ ಹಗಲಿರುಳು ದುಡಿದು ಕಷ್ಟಪಟ್ಟು ಅದನ್ನು ತೀರಿಸೋಣ. ವೆಂಕಟಸ್ವಾಮಿಯು ನಿಜವಾಗಿಯೂ ನಮ್ಮನ್ನು ಋಣಮುಕ್ತರನ್ನಾಗಿ ಮಾಡಿ ಇಲ್ಲಿಯೇ ನಮಗೆ ಸುಖ ಕೊಡುವನು. ನಾವು ನಮ್ಮ ಸತ್ಯಮಾರ್ಗವನ್ನು ಬಿಡದಿದ್ದರಾಯಿತು. ಯಾಕೆ, ಪಟ್ಟಣಕ್ಕೆ ಹೋಗುವದಿಲ್ಲವಷ್ಟೆ? ಹೋಗುವ ವಿಚಾರವನ್ನು ಬಿಟ್ಟುಕೊಟ್ಟಿರಲ್ಲವೆ?"

ಮೀನಾಕ್ಷಿಯ ದೀನವಾದ ಮುಖಚರ್ಯದ ಕಡೆಗೆ ನೋಡುತ್ತ ಧನಪತಿಯು: "ಹೌದು........ಆದರೆ... ....ಹೀಗೆ......."

ಆಗ ಮೀನಾಕ್ಷಿಯು ಆವೇಶದಿಂದ: "ಇಲ್ಲ. ನಾನು ಇಲ್ಲಿಂದ ನಿಮ್ಮನ್ನು ಎಲ್ಲಿಗೂ ಹೋಗಗೊಡುವದಿಲ್ಲ. ನೀವು ಒಂದು ಕ್ಷಣ ಕಣ್ಣುಮರೆಯಾದರೆ, ನನ್ನ ಜೀವವು ಹೇಗೆ ಹೇಗೋ ಆಗುತ್ತದೆ. ನಿಮಗೆ ನಗರಕ್ಕೆ ಹೋಗುವದೇ ಇಷ್ಟವಿದ್ದ ಪಕ್ಷದಲ್ಲಿ ನಿಮ್ಮ ಕೈಯಿಂದಲೇ ಈ ನನ್ನ ಶಿರವನ್ನು ಕತ್ತ...."ಎಂದು ಉಚ್ಚರಿಸುವಷ್ಟರಲ್ಲಿಯೇ ಧನಪತಿಯು ಅವಳ ಬಾಯಿಯ ಮೇಲೆ ತನ್ನ ಕೈ-ಯಿಟ್ಟು: "ಶಾಂತಂ ಪಾಪಂ! ಛೀ-ಛೀ! ಮೀನಾ, ಪ್ರಿಯೆ, ಇದೇನು ಅಭದ್ರವನ್ನು ನುಡಿಯಲಾರಂಭಿಸಿದೆ? ನಿನ್ನನ್ನು ಬಿಟ್ಟು ಈ ಜಗತ್ತಿನಲ್ಲಿ ಒಂದು ಕ್ಷಣವಾದರೂ ನಾನು ಜೀವವನ್ನು ಹಿಡಿಯಬಲ್ಲೆನೇ? ಆದರೆ........"

"ಅನೇಕಿಲ್ಲ. ಈ ಕ್ಷಣದಲ್ಲಿಯೇ ನೀವು ವೆಂಕಟಸ್ವಾಮಿಯ ಪಾದಸಾಕ್ಷಿಯಾಗಿ ಪಟ್ಟಣಕ್ಕೆ ಹೋಗುವ ವಿಚಾರವನ್ನು ಬಿಟ್ಟುಗೊಟ್ಟೆನೆಂದು ಹೇಳಿರಿ. ಬೇರೆ ಯಾವ ಮಾತುಗಳೂ ನನಗೆ ಬೇಡ."

ಮೀನಾಕ್ಷಿಯ ಕೈಯನ್ನು ತನ್ನ ಕೈಯಲ್ಲಿ ಹಿಡಿದು, ಧನಪತಿಯು ನಿಶ್ಚಯಸ್ವರದಿಂದ: "ವೆಂಕಟಸ್ವಾಮಿಯ ಪಾದಸಾಕ್ಷಿಯಾಗಿ ವಿಜಯನಗರಕ್ಕೆ ಹೋಗುವ ನನ್ನ ವಿಚಾರವನ್ನು ಪೂರಾ ಬಿಟ್ಟುಕೊಟ್ಟಿರುತ್ತೇನೆ. ಮೀನಾ, ಈಗಾದರೂ ನಿನ್ನ ಮನಸ್ಸಿನ ಸಮಾಧಾನವಾಯಿತಷ್ಟೇ!"ಎಂದು ಕೇಳಿದನು.

---

## (೨)

ವಿಜಯನಗರಕ್ಕೆ ಹೋಗುವ ವಿಚಾರವನ್ನು ಧನಪತಿಯು ರಹಿತ ಮಾಡಿದ ಮೇಲೆ ೩ ೪ ತಿಂಗಳುಗಳು ಕಳೆದು ಹೋದವು. ಆ ಬಡ, ಆದರೆ ಸದ್ಗುಣ ಯುಕ್ತ ನೇಕಾರ ದಂಪತಿಗಳ ಸಂಸಾರವು ಯಥಾಕ್ರಮವಾಗಿ ಹೇಮಂತ ಋತುವನ್ನು ಸುಖದಿಂದ ಸಮಾಧಾನದಿಂದ ದಾಟಿತು ಚಳಿಗಾಲದ ಚಳಿಯು ಅವರಿಗೆ ಅಷ್ಟೊಂದು ತೊಂದರೆಯನ್ನು ಕೊಡಲಿಲ್ಲ ಯಾಕಂದರೆ ಅವರಿಗೆ ಪರಸ್ಪರ ಪ್ರೇಮದ ಬೆಚ್ಚಗಿನ ಹೊದಿಕೆಯು ಅವರಿಗೆ ಇದ್ದೇ ಇದ್ದಿತು! ಬೇಸಿಗೆಯು ಪ್ರಾರಂಭವಾಯಿತು. ಒಂದು ದಿನ ಮೇಘಮಂಡಲಗಳಿಂದ ಆಚ್ಛಾದಿತವಾದ ಆಕಾಶವು ಸೂರ್ಯಪ್ರಕಾಶವನ್ನು ಅಡಗಿಸಿತು ಸಂಧ್ಯಾಕಾಲವಾದಂತೆ ಮುಂಗಾರಿಮಳೆಯು ಕಲ್ಲಿನಂತೆ ಸುರಿಯಹತ್ತಿತು.

ಇಂಥ ಭಯಾನಕವಾದ ಆ ರಾತ್ರಿಯನ್ನು ನಮ್ಮ ಆ ತರುಣದಂಪತಿಗಳು ಹೇಗೆ ಕಳೆದಿರಬಹುದೆಂಬದನ್ನು ನಮ್ಮ ಸಹೃದಯ ವಾಚಕರೇ ಊಹಿಸಬಹುದು.

ಬೆಳಗಾಗಬಂದಂತೆ ಭೀಕರವಾದ ಸುಂಟರಗಾಳಿಯು ಬೀಸಹತ್ತಿತು ಆಗಂತೂ ಆ ಚಂದ್ರಮೌಳಿ ಚಪ್ಪರವೂ ಆಕಾಶಕ್ಕೆ ಹಾರಿ ಹೋಗುತ್ತದೆಂಬಂತೆ ತೋರಹತ್ತಿತು. ಅದರಂತೆ ಕೂಡಲೆ ಆ ಚಪ್ಪರದ ಕೆಲವು ಭಾಗವು ನೆಲಸಮ ವಾಗಿಯೇ ಬಿಟ್ಟಿತು! ಆದರೂ ಆ ದಂಪತಿಗಳು ಧೈರ್ಯದಿಂದ ರಾತ್ರಿಕಾಲ ವನ್ನು ಸಂಪೂರ್ಣ ಜಾಗರಣೆಯಲ್ಲಿಯೇ ಕಳೆದರು.

ಬೆಳಗಿನ ಜಾವದಲ್ಲಿ ಗಾಳಿಯು ಕಡಿಮೆಯಾಯಿತು ಸುತ್ತು ಕಡೆಗೂ ಶಾಂತತೆಯಾಯಿತು. ಮುಂಜಾನೆಯ ಕೆಲಸಗಳನ್ನು ತೀರಿಸಿಕೊಂಡು ಮೀನಾಕ್ಷಿಯು ಬೇಳೆಗಳನ್ನು ಕೇರುತ್ತಾ ಕುಳಿತುಕೊಂಡಿದ್ದಳು ಧನಪತಿಯು ಗುಡುಗುಡಿಯ ಝುರಿಕೆ ಹೊಡೆಯುತ್ತ ಅದರ ಸ್ವಾದದಿಂದ ಪ್ರಸನ್ನಚಿತ್ತನಾಗಿ: "ಅಹಹಾ! ಮೀನಾ! ನಿನ್ನೆನದು ಎಂಥ ರಾತ್ರಿಯದು!" ಎಂದು ಉದ್ಗಾರ ತೆಗೆದನು

ಮೀನಾಕ್ಷಿಯು. "ಅದು ಭೀಕರವಾದದ್ದು. ನನಗಂತೂ ಆಗ ಪ್ರತಿಕ್ಷಣ ದಲ್ಲಿಯೂ ನಾವು ಕಾಲನ ದವಡೆಯಲ್ಲಿ ಸಿಕ್ಕಂತೆ ಭಾಸವಾಗುತ್ತಿತ್ತು, ಈ ಲೋಕದ ಋಣಾನುಬಂಧವು ಹರಿಯುವ ವೇಳೆಯು ಪ್ರಾಪ್ತವಾದಂತೆ ತೋರಿತು. ಅವ್ವಯ್ಯಾ! ಅದನ್ನು ನೆನಿಸಿದರೆ ಮೈ ಜುಮ್ಮೆನ್ನುತ್ತಿದೆ!"

"ಛೇ, ಪ್ರಿಯೇ, ಹೀಗೇಕೆ ಅಮಂಗಲವಾದ ಮಾತನ್ನಾಡುವಿ?"

"ಮಾತಾಡದಿದ್ದರೆ ಆಗತಕ್ಕ ಅಮಂಗಲವಾದ ಸಂಗತಿಯು ತಪ್ಪೀತೇ? ನಿಮಗೆ ನಾನು ನಿಜವಾಗಿ ಹೇಳುತ್ತೇನೆ, ಈ ಎರಡು ತಿಂಗಳುಗಳಲ್ಲಿ ಈ ಮನೆಯ ದುರಸ್ತಿಯ ವ್ಯವಸ್ಥೆಯನ್ನು ಅತ್ಯವಶ್ಯವಾಗಿ ಮಾಡಲೇಬೇಕು ಇಲ್ಲ ದಿದ್ದರೆ ಇದರ ನಾಶವಾಗುವದೇ ಸತ್ಯವು."

ಧನಪತಿಯು ಕೂಡಲೆ ನಗೆಮುಖದಿಂದ "ಅದಕ್ಕೆ ನನ್ನ ಹತ್ತರ ಒಂದು ಯುಕ್ತಿಯಿದೆ!" ಎಂದು ಅಂದನು

ಮೀನಾಕ್ಷಿಯು ಕುತೂಹಲದಿಂದ. "ಅದಾವ ಯುಕ್ತಿಯು?" ಎಂದು ವಿಚಾರಿಸಿದಳು.

"ನಾವು ಒಂದು ಗಿಡದ ನೆರಳಲ್ಲಿಯೇ ನಮ್ಮ ಸಂಸಾರವನ್ನು ಹೂಡಿದ ರಾಯಿತು. ಸರಿಯಷ್ಟೇ?"

"ಗಿಡದ ನೆರಳಿನಲ್ಲಿ ಇಲ್ಲವೆ ಅದರ ಎಲೆಗಳಿಂದ ಮಳೆಯ ನೀರಿನಿಂದ ಸಂರಕ್ಷಿತವಾಗುವ ಬಗೆ ಹೇಗೆ? ಮಹಾರಾಜ ಈ ಗಿಡಗಳು ಬಹು ವಿಶ್ವಾಸ ಘಾತುಕವಾಗಿರುತ್ತವೆಂಬದನ್ನು ಅರಿಯಿರಾ? ಮಳೆಯ ಪ್ರಾರಂಭದಲ್ಲಿ ವೃಕ್ಷಗಳ ಆಶ್ರಯವು ಯೋಗ್ಯವಾಗಿರುತ್ತದೆ, ಆದರೆ ಮುಂದೆ ಮಳೆ ನಿಂತ ಮೇಲ ಅವುಗ ಳನ್ನು ಆಶ್ರಯ ಮಾಡಿದವರಿಗೆ ಹುಂಡಬ್ಬೈಲಿಗಿಂತಲೂ ಅವುಗಳಿಂದ ಬೀಳುವ ಹನಿಗಳಿಂದ ಹೆಚ್ಚು ತಾಪವಾಗುತ್ತದೆ! ಕೇವಲ ಗಿಡಗಳ ಆಶ್ರಯದಿಂದ ಆಗುವ ದೇನು?"

ಧನಪತಿಯು ಚೇಷ್ಟೆಯಿಂದ "ನಾನು ಗಿಡದ ಟೊಂಗೆಗಳ ಮೇಲ ಅಡ್ಡ ಮಲಗಿ ನೆರಳು ಮಾಡಿ ನಿನ್ನನ್ನು ಸಂರಕ್ಷಿಸುವೆನು ಹೆದರಬೇಡ ಆ ನನ್ನ ಆಶ್ರ ಯದ ಕೆಳಗೆ ನೀನು ಸುಖದಿಂದ ನಿನ್ನ ಸಂಸಾರವನ್ನು ಹೂಡು ಅಂದರಾಯಿ ತಷ್ಟೇ? ಈಗಾದರೂ ನಿನ್ನ ಚಿಂತೆಯು ದೂರವಾಯಿತಲ್ಲವೇ?" ಎಂದು ಪರಿ ಹಾಸ ಮಾಡಿದನು.

ಆಗ ಮೀನಾಕ್ಷಿಯು ಕುಲು ಕುಲು ನಗುತ್ತ: ಓಹೋ! ಇದು ಮಾತ್ರ ಬಹು ಅಪೂರ್ವ ಶೋಧವು! ಇದೇನು ಮಾತಾಡುವ ಪದ್ಧತಿಯು? ನಿಮ್ಮ ಬೆನ್ನನ್ನು ದೇವರು ಕಲ್ಲು ಮಣ್ಣಿನಿಂದ ಮಾಡಿರುವನೇ? ಅದಾದರೂ ಮಾಂಸ- ಚರ್ಮಾಚ್ಛಾದಿತವಲ್ಲವೇ? ಕಲ್ಲು ಮಣ್ಣು ಮಳೆಯನ್ನು ಸಹಿಸಿದಂತೆ ಮಾಪೀನ ಚರ್ಮಾಚ್ಛಾದಿತ ಶರೀರವು ಸಹಿಸಲಾರದೆಂಬದನ್ನು ನೀವು ಅರಿಯದವರೇ?

ನೀವು ಗಿಡದ ಮೇಲೆ ಇದ್ದರೆಂದರೆ ಅದರ ಪರಿಣಾಮವೇನಾಗುವದೆಂಬದನ್ನು ತಿಳಿದಿರುವಿರಷ್ಟೇ?''

''ಪಂಡಿತಳೇ ಅದೇನಾಗುವದೆಂಬದನ್ನು ನೀನೇ ಹೇಳಿಬಿಡು!''

''ನಿಮ್ಮ ಜೆನ್ನಿನ ರಕ್ಷಣೆ ಮಾಡುವದಕ್ಕಾಗಿ ನಿಮ್ಮ ಮೇಲಿನ ಟೊಂಗೆಯ ಮೇಲೆ ನಾನು ಬೀಳಬೇಕಾಗುವದು ನಾನಂತೂ ಹೇಳಿ ಕೇಳಿ ಸೂಕ್ಷ್ಮ-ಶರೀರಳಾದ ಅಬಲೆಯು ಅಬಲೆಯರಿಗೆ ಒಂದು ಕ್ಷಣಸಹ ಬಿಸಿಲು-ಮಳೆ-ಗಾಳಿಗಳನ್ನು ಸಹಿಸುವದು ಅಸಾಧ್ಯವೇ ಸರಿ ಅಂದಮೇಲೆ ನಮ್ಮಿಬ್ಬರ ಬೆನ್ನುಗಳು ಸಂರಕ್ಷಿಸಲ್ಪಡಬೇಕೆಂಬ ಇಚ್ಛೆಯಿದ್ದದ್ದೇ ಆದರೆ ಈ ಚರ್ಮ, ಮಾಂಸ, ಎಲವುಗಳಿಗಿಂತಲೂ ಕಠಿಣವಾಗಿರುವ ಮತ್ತು ಮಳೆ ಗಾಳಿ-ಬಿಸಿಲುಗಳಿಂದ ಸಂರಕ್ಷಿಸುವ ಶಕ್ತಿಯುಳ್ಳ ಕಲ್ಲು, ಮಣ್ಣು, ಬಿದುರು, ಸುಣ್ಣ, ಹಗ್ಗ ಮೊದಲಾದ ಸಾಮಗ್ರಿಗಳನ್ನು ದೊರಕಿಸಲಿಕ್ಕೆ ನೀವು ಈಗಿನಿಂದಲೇ ಯತ್ನಮಾಡಿರಿ. ಅವುಗಳಿಲ್ಲದೆ ಇರಲಿಕ್ಕೆ ಮನೆ ಸಿಗಲಾರದು ಮನೆಯಿಲ್ಲವಿದ್ದರೆ ಸ್ವರ್ಗಸುಖದ ಒಂದು ಕಣವಾದರೂ ಸಿಗುವದು ಸಾಧ್ಯವೇ?''

ಆಗ ಆತನು ಬಹು ಖಿನ್ನವದನನಾಗಿ. ''ಆಯೀ, ನೀನು ಹೇಳುವದೆಲ್ಲವು ಅಕ್ಷರಶಃ ನಿಜವಾದದ್ದು ಆದರ ಏನು ಮಾಡಲಿ? ಇದಕ್ಕೆಲ್ಲ ಎಷ್ಟು ಹಣ ಬೇಕಾಗುವದೋ ದೇವರೇ ಬಲ್ಲನು! ಮೇಲಾಗಿ ಈಗ ಏಷತೆಗೆದುಕೊಳ್ಳಬೇಕೆಂದರೂ ನನ್ನಲ್ಲ ಒಂದು ದುಡ್ಡು ಸಹ ಇಲ್ಲ!'' ಎಂದು ಮಾತಾಡಿ ದೀರ್ಘವಾಗಿ ಉಸಿರು ಬಿಟ್ಟನು

''ಇದೆಲ್ಲವೂ ಸತ್ಯವೇ ಆದರ ಮಾಡಬೇಕಾದದ್ದನ್ನು ಮಾಡಿಯೇ ತೀರಬೇಕಲ್ಲವೆ?'' ಎಂದಂದು ಊನಾಕ್ಷಿಯೂ ಸುಮ್ಮನಾದಳು

ಕೆಲವು ಗಳಿಗೆಯ ಮೇಲ ಧನಪತಿಯು ' ಊನಾ, ಕೇವಲ ಮೌನದಿಂದ ಕುಳಿತರ ಆಗುವದೇನು? ನನಗಂತೂ ಯಾವ ಯುಕ್ತಿಯೂ ಹೊಳೆಯಲೊಲ್ಲದು. ಸಾಲವನ್ನಂತೂ ನನಗೆ ಇನ್ನು ಯಾರೂ ಕೊಡುವದಿಲ್ಲ —'

''ಯಾರಾದರೂ ಸಾಲ ಕೊಡತಕ್ಕವರಿದ್ದರೂ ನಾನು ಸಾಲಮಾಡಗೊಡತಕ್ಕವಳಲ್ಲ '' ಎಂದು ಅತ್ಯಂತ ಆವೇಶದಿಂದ ಊನಾಕ್ಷಿಯು ಮಾತಾಡತೊಡಗಿದಳು: ''ಮಾವಂದಿರ ಕಾಲದ ಸಾಲವೇ ಇನ್ನೂ ಸಾಕಷ್ಟು ಸಾಲವಾಗಿಲ್ಲವೆ? ಅದರಿಂದಲೇ ಜೀವವು ಹಣ್ಣು ಹಣ್ಣಾಗಿ ಒದ್ದಾಡುತ್ತದ ಆ ಯಾತನೆಯನ್ನು ಇನ್ನಿಷ್ಟು ಹೆಚ್ಚಿಸಬೇಕೆ?'' ಎಂದು ಪ್ರಶ್ನ ಮಾಡಿದಳು.

ಹಾಗಾದರೆ ಮಾಡುವದೇನು?

ಮೀನಾಕ್ಷಿಯು ದೀರ್ಘವಾಗಿ ಉಸುರ್ಗರೆದು: "ಅವ್ವಯ್ಯಾ! ನನಗೊಂದು ಮಾರ್ಗವು ಹೊಳೆಯುತ್ತದೆ. ಆದರೆ ಆ ಯುಕ್ತಿಯು ಬಹಳ ಕಠಿಣವಾದದ್ದು. ಆದರೆ ಅದರಿಂದ ಕಾರ್ಯವಂತೂ ಆಗಿಯೇ ತೀರುವಂತೆ ನನಗೆ ಭರವಸೆಯು ಹುಟ್ಟುತ್ತದೆ"

ಧನಪತಿಯು ಅತ್ಯಂತ ಉಲ್ಲಸಿತ ಮನಸ್ಕನಾಗಿ "ಹೇಳು, ಮೊದಲು ಹೇಳು ಆ ಯುಕ್ತಿಯನ್ನು ಎಷ್ಟೇ ಪ್ರಯಾಸವಾಗಲಿ, ತೊಂದರೆಗಳು ಬರಲಿ ಮಾಡಿಯೇ ತೀರೋಣ"

"ಹೇಳಲಾ? ಸಿಟ್ಟುಬರುವದಿಲ್ಲವಷ್ಟೇ"

"ಮೀನಾ, ನಿನ್ನ ಮೇಲೆ ನಾನು ಸಿಟ್ಟು ಮಾಡುವೆನೆ? ಹೇಳು-ಹೇಳು ನೋಡುವಾ?"

"ಹಣಸಂಪಾದನೆ ಮಾಡಲಿಕ್ಕೆ ಎರಡು ಮಾರ್ಗಗಳು—ಅಧಿಕವಾದ ಶ್ರಮವನ್ನು ಮಾಡಿ ಅಧಿಕವಾದ ಹಣವನ್ನು ದೊರಕಿಸುವದು ಒಂದು ಮಾರ್ಗ, ಹಾಗು ಕಡಿಮೆ ಖರ್ಚುಮಾಡಿ ಶಿಲ್ಕು ಉಳಿಸುವದು ಮತ್ತೊಂದು ಮಾರ್ಗ; ಈ ಎರಡೂ ಮಾರ್ಗಗಳನ್ನು ಅವಲಂಬಿಸಿ ನಾವು ಹಣವನ್ನು ಕೂಡಿ ಹಾಕಬೇಕು." ಎಂದು ಮೀನಾಕ್ಷಿಯು ನುಡಿದಳು.

ಖಿನ್ನತೆಯಿಂದ ನಿಟ್ಟುಸಿರು ಬಿಡುತ್ತ ಧನಪತಿಯು. "ನಿನ್ನ ಮೊದಲನೆಯ ಮಾರ್ಗವು ನನಗೆ ಪೂರ್ಣ ಸಮ್ಮತವಾದದ್ದು. ಅಹೋ ರಾತ್ರಿ ಶ್ರಮಪಟ್ಟು, ವಸ್ತ್ರಗಳನ್ನು ನೆಯ್ಯೋಣ. ಆದರೆ ನಿನ್ನ ಎರಡನೇ ಮಾರ್ಗದಂತೆ ಕಡಿಮೆ ಖರ್ಚು ಮಾಡಿ ಹಣ ಉಳಿಸುವದೆಂತು? ನಾವೇನು ಅಂಥ ಡೌಲಿನ ಅನವಶ್ಯಕವಾದ ವಿಲಾಸದಲ್ಲಿ ಇರುತ್ತೇವೆ? ಎರಡು ಹೊತ್ತು ಎರಡು ಮುಷ್ಟಿ ಧಾನ್ಯಗಳ ಮೇಲೆ ನಾವು ನಿರ್ವಾಹ ಸಾಗಿಸಹತ್ತಿರುತ್ತೇವೆ—"

ಅಂತೆಯೇ ಕಾರ್ಯವು ಕಷ್ಟಕರವಾದದ್ದೆಂದು ನಾನು ಹೇಳುತ್ತೇನಲ್ಲವೆ? ಅದರಲ್ಲಿಯೇ ನಾವು ಉಳಿಸಬೇಕಾಗಿದೆ. ಇಲ್ಲದಿದ್ದರೆ ಬೇರೆ ಯಾರ ಕಡೆಯಿಂದಾದರೂ ಸಹಾಯವು ದೊರಕುವಂತಿದೆಯೇ? ನಮ್ಮಷ್ಟಕ್ಕೆ ನಾವೇ ಮಾಡಬೇಕಾಗಿದೆ. ಬಹಳವಿಲ್ಲದಿದ್ದರೂ ಒಂದೆರಡು ತಿಂಗಳು ಕಷ್ಟಪಡೋಣ. ಎರಡು ಹೊತ್ತು ಊಟ ಮಾಡುವದನ್ನು ಬಿಟ್ಟು ಒಂದೇ ಊಟ ಮಾಡಿ ಉದರ ನಿರ್ವಾಹ ಸಾಗಿಸೋಣ. ಜೋಳ ವಗೈರೆ ಧಾನ್ಯಗಳನ್ನು ತರುವದನ್ನು ಬಿಟ್ಟು

ಗೊಟ್ಟು ಬರೆ ಒಣರೊಟ್ಟಿಗಳನ್ನು ಕಡಿದು ಜೀವಧಾರಣ ಮಾಡೋಣ. ಅಂತೂ ಇಂತೂ ಒಂದು ಊಟ ಉಪವಾಸ ಮಾಡಿ ಎರಡು ತಿಂಗಳು ಕಳೆಯೋಣ. ಅಂದರೆ ಅದರಿಂದ ಕೆಲವು ಹಣವು ಕೂಡಿ ಬೀಳುವದು. ಅದರಿಂದ ನಮ್ಮ ಕಾರ್ಯವಾಗುವದೆಂದು ನನಗೆ ಅನಿಸುತ್ತದೆ. ನೀವೂ ವಿಚಾರ ಮಾಡಿ ನೋಡಿರಿ'' ಎಂದು ಸೂಚಿಸಿದಳು.

ಮೀನಾಕ್ಷಿಯು ಸೂಚಿಸಿದ ಯುಕ್ತಿಯು ಧನಪತಿಯ ಮನಸ್ಸಿಗೆ ಬಂದಂತೆ ಕಂಡಿತು ಬಹು ಉಲ್ಲಾಸದಿಂದ ತಲೆ ಹಾಕುತ್ತ ''ಒಳ್ಳೇ ಹಂಚಿಕೆಯು-ಉತ್ತಮವಾದ ಹಾದಿಯು! ನೀನು ಹೇಳುವಂತೆಯೇ ಮಾಡೋಣ. ಹಸಿವೆಯ ಸಂಗಡ ಕಾದಾಡುವ ಸಾಮರ್ಥ್ಯವು ನಿನ್ನಲ್ಲಿ ಇದ್ದರೆ ನನ್ನಲ್ಲಿಯೂ ಖಾತ್ರಿಯಿಂದ ಆ ಶಕ್ತಿಯು ಇದ್ದೇ ಇರುವದು. ಹಸಿವೆಯ ಬೇಂಕಿಯನ್ನು ನಿನಗಿಂತಲೂ ನಾನು ಅಧಿಕವಾಗಿ ಸಹಿಸಬಲ್ಲೆನು. ಮೀನಾ, ಎಷ್ಟೇ ಆಗಲಿ, ನೀನು ಅಬಲೆಯು; ನಾನು ಪುರುಷನು. ಬುದ್ಧಿಯ ಕೆಲಸದಲ್ಲಿ ನಾನು ನಿನ್ನನ್ನು ಒಂದು ವೇಳೆ ಸರಿಗಟ್ಟಲಾರೆನು, ಆದರೆ ಶಕ್ತಿ ಸಾಮರ್ಥ್ಯವನ್ನು ದೇವರು ನಿನಗಿಂತಲೂ ನನಗೆ ಅಧಿಕವಾಗಿ ಕೊಟ್ಟಿರುವನು, ಅದರ ನಂಬಿಗೆಯಾದರೂ ಬೇಡವೇ?'' ಎಂದು ಧನಪತಿಯು ನುಡಿದನು.

ಆಯಿತು! ಆ ದಂಪತಿಗಳು ಕೂಡಲೆ ಆ ನಿರ್ಣಯವನ್ನು ಅಮಲಿನಲ್ಲಿ ತರಹತ್ತಿದರು. ಈ ರೀತಿಯಿಂದ ಕಷ್ಟಪಟ್ಟು ಅವರು ಕೆಲವು ಹಣವನ್ನು ಸಂಪಾದಿಸಿದರು; ಮನೆ ಕಟ್ಟುವ ಸಾಧನಗಳನ್ನು ಸಂಗ್ರಹಿಸಿದರು, ಹಾಗು ಒಬ್ಬ ಸಜ್ಜನ ನೆರೆಹೊರೆಯವನ ಸಹಾಯದಿಂದ ತಮ್ಮ ಮುರುಕಳಿಗೆ ಬಂದ ಮನೆಯನ್ನು ರಿಪೇರಿ ಮಾಡಿಕೊಂಡರು. ಆ ದಿವಸ ಅವರಿಗಾದ ಆನಂದವು ಇಷ್ಟಿಷ್ಟೆಂದು ವರ್ಣಿಸಲು ಅಸಾಧ್ಯವು. ಅವರ ಆನಂದವು ಆಕಾಶದಂತೆ ಅಪಾರವಾಗಿದ್ದಿತು!

---

(೩)

...

ಒಂದು ದಿನ ಮುಂಜಾನೆ ಹಾಸಿಗೆಯಿಂದ ಎದ್ದ ಕೂಡಲೆ ಧನಪತಿಯು ಮೀನಾಕ್ಷಿಗೆ. "ಮೀನಾ, ಈ ದಿನ ನನ್ನ ಮನಸ್ಸಿನಲ್ಲಿ ಒಂದು ವಿಚಾರವು ಬಂದಿದೆ. ನೀನು ಸಿಟ್ಟು ಮಾಡದಿದ್ದರೆ ನಾನು ನಿನಗೆ ಅದನ್ನು ಹೇಳುವೆನು."

"ದಯಮಾಡಿ ಹೇಳಿರಿ ನಾನು ಎಂದಾದರೂ ನಿಮ್ಮ ಮೇಲೆ ಸಿಟ್ಟು ಮಾಡಿರುವೆನೆ? ಇದೇನು ಇಂದಿನ ಪ್ರಸ್ತಾವನೆಯು?"

ಧನಪತಿಯು ನಗುತ್ತ "ಅದೇಕೆ, ಆ ದಿವಸ ನೀನು ಮಾಡಿದ ಕೋಪಾಟೋಪವು ಸ್ವಲ್ಪವೇ? ನಮ್ಮ ಅಪ್ಪನವರು ನಾನು ವಿಜಯನಗರಕ್ಕೆ ಹೋಗುತ್ತೇನೆಂದು ತಿಳಿದ ದಿವಸ ಮಾಡಿದ ಸಿಟ್ಟಿನ ಭರವನ್ನು ಮರೆತಂತೆ ಕಾಣುತ್ತದೆ —"

ಮೀನಾಕ್ಷಿಯೂ ನಗುತ್ತಲೇ. "ಆ ದಿವಸದ ನಿಮ್ಮ ಅಪರಾಧವೇ ಅಷ್ಟು ಭಯಂಕರವಾಗಿದ್ದಿತು. ಯಾಕೆ, ಸುಳ್ಳೋ? ಇರಲಿ. ಅದೇನು ಹೇಳುವದು, ಒಮ್ಮೆ ದಯಮಾಡಿ ಹೇಳಿರಿ ಈ ರೀತಿ ಕಾಡುವದು ಒಳಿತಲ್ಲ!"

ಹೆಂಡತಿಯ ಹೆಗಲ ಮೇಲೆ ಕೈಯಿಟ್ಟು ಧನಪತಿಯು ಪ್ರೇಮದಿಂದ-"ಮೀನಾ, ಇಂದಿನ ದಿನವು ದೊಡ್ಡ ಹಬ್ಬದ ದಿನವೆಂದು ತಿಳಿದು ಬಹು ಆನಂದದಿಂದಲೂ ವಿನೋದದಿಂದಲೂ ಕಳೆಯೋಣ. ಅಪಾರವಾದ ಕಷ್ಟ-ನಷ್ಟಗಳನ್ನು ಸಹಿಸಿ, ಉಪವಾಸ-ಉಪೋಷಣೆ ಮಾಡಿ, ಹಗಲು-ರಾತ್ರಿಯೆನ್ನದೆ, ನಿದ್ದೆ-ನೀರಡಿಕೆಯೆನ್ನದೆ, ನಾವು ಈ ಮನೆ ಕಟ್ಟುವ ಕೆಲಸವನ್ನು ದೇವರ ಕೃಪೆಯಿಂದ ಇಂದಿಗೆ ಪೂರ್ಣ ಮಾಡಿರುವೆವು ಪ್ರೇಮದ ಅರಗಿಳಿಯೇ, ಮೀನಾ, ನಿನ್ನ ಅವರ್ಣನೀಯವಾದ ಶ್ರಮದಿಂದಲೂ ಜಾಣತನದಿಂದಲೂ, ದೂರದೃಷ್ಟಿಯಿಂದಲೂ ಇಂದಿನ ಈ ಆನಂದದ ದಿನವು ಬೆಳಗಾಗಿದೆ. ಈ ದಿನ ಗೃಹಪ್ರವೇಶ ದಿನವೆಂದು ಬಹು ಆನಂದದಿಂದಲೂ ಸಂಭ್ರಮದಿಂದಲೂ ಇದನ್ನು ಕಳೆಯೋಣ. ಈಗ ನಮ್ಮ ಹತ್ತಿರ ಹಣವೂ ಸಾಕಷ್ಟಿದೆ ಮೇಲಾಗಿ ಮಗ್ಗದ ಮೇಲಿನ ಹೊಸ ವಸ್ತ್ರವೂ ತಯಾರಾಗಿದೆ ಅದರ ಮಾರಾಟದಿಂದ ಈ ದಿನವೇ ಝಣ ಝಣವೆಂದು ರೂಪಾಯಿಗಳು ಉದುರುವವು ಅದರಿಂದ ಮುಂದೆ ಬರುವ ಕೆಲವುದಿನಗಳ ಮಟ್ಟಿಗಾದರೂ ಚಿಂತೆ ಮಾಡುವ ಕಾರಣವಿಲ್ಲ ಅಂದಮೇಲೆ ಆಯಿತು. ಇಂದು ಆನಂದ ವಿನೋದ-ಸಂಭ್ರಮಗಳ ಹೊರತು ಬೇರೆ ವಿಷಯವೇ ಇಲ್ಲ!"

ಪತಿಯ ಕೈಯನ್ನು ಗಟ್ಟಿಯಾಗಿ ಹಿಡಿದು ಮೀನಾಕ್ಷಿಯು ಆನಂದದ

ಭರದಿಂದ: "ನಿಮ್ಮ ಆಜ್ಞೆಯ ಹೊರಗೆ ನಾನು ಇರುವೆನೇ?" ಎಂದು ಪತಿಯ ಕಡೆಗೆ ಒಂದೇಸವನೆ ನೋಡತೊಡಗಿದಳು.

ಆಗ ಧನಪತಿಯು ಅವಳನ್ನು ತನ್ನ ಹತ್ತಿರಕ್ಕೆ ಎಳೆದುಕೊಂಡು ದೃಢವಾಗಿ ಆಲಿಂಗಿಸಿ,ಅವಳ ಭ್ರಮರ ಕುಂತಲದ ಮೇಲೆ ಪ್ರೇಮಭರದಿಂದ ಮೆಲ್ಲ ಮೆಲ್ಲನೆ ಕೈಯಾಡಿಸುತ್ತ: "ಪ್ರಿಯತಮೆ, ಏನು ನಿನ್ನ ಅವಸ್ಥೆಯಿದು! ಚಿರ ಪ್ರಫುಲ್ಲಿತವಾದ ನಿನ್ನ ಮುಖ ಕಮಲವು ತೀರ ಬಾಡಿಹೋಗಿದೆಯಲ್ಲ! ಕಣ್ಣುಗಳು ಒಳನಟ್ಟಿವೆ! ಅದರ ಸುತ್ತಮುತ್ತಲಿನ ಭಾಗವು ಕಪ್ಪಾಗಿದೆ. ಕುತ್ತಿಗೆಯು ಉದ್ದವಾಗಿದೆ! ಪೂರ್ವದ ತುಂಬಿದ ಗಲ್ಲಗಳು ತಗ್ಗುಬಿದ್ದಿವೆ! ಕೈಯಲ್ಲಿಯ ಬಳೆಗಳು ಮೊಳಕೈ ವರೆಗೆ ಹೋಗಿವೆ! ಮೀನಾ ಮೀನಾ, ಪ್ರೇಮಳೆ, ನಿನ್ನ ಮುಖಾರವಿಂದವು ಮೊದಲಿನ ಸೊಬಗನ್ನು ತಳೆಯುವದೆ? ಕಪೋಲಗಳ ತೇಜವು ಅರಳುವದೇನು? ನಿನ್ನ ಕಯ್ಯು ಪೂರ್ವದಂತೆ ದುಂಡು-ಗುಂಡಾಗಿ ನಿನ್ನ ಸುಂದರವಾದ ಮುಂಗೈಯ ಮೇಲೆ ಈ ನಿನ್ನ ಮಂಗಲಕರವಾದ ಬಳೆಗಳು ಬಿಗಿಯಾಗಿ ಕೂಡುವದೆಂದು!" ಎಂದು ಮೃದು ಮಧುರ ಮಾತುಗಳನ್ನಾಡುತ್ತ ಮೀನಾಕ್ಷಿಯ ಎರಡೂ ಕೈಗಳನ್ನು ತನ್ನ ಮುಖದ ಕಡೆಗೆ ತಕ್ಕೊಂಡನು. ಅವನ ಕಣ್ಣುಗಳಿಂದ ಒಂದೇಸವನೆ ನೀರು ಹರಿಯುತ್ತಿದ್ದಿತು ಮೀನಾಕ್ಷಿಯ ಕೈಗಳು ಅವನ ನೇತ್ರಜಲದಿಂದ ತೊಯ್ದು ಹೋದುವು ಅವಳೂ ಅವನನ್ನು ದೃಢತರವಾಗಿ ಆಲಿಂಗಿಸಿ ತನ್ನ ಬಾಹುಲತೆಯ ಪಾಶದಿಂದ ಅವನ ಕಂಠವನ್ನು ಬಿಗಿದಳು

"ನೀವು ಹೇಳುವ ಮಾತು ನಿಜವೇ. ಸ್ವಲ್ಪ ವೇಳೆ ತಡೆಯ ಬೇಕು. ಸುಮ್ಮನೆ ಮನಬಂದಂತೆ ಅರಿವೆಯನ್ನು ಮಾರಿದರ ಪ್ರಯೋಜನವೇನು? ಈಗ ಹತ್ತಿರವಿದ್ದ ಹಣದಿಂದ ಈ ದಿನಕ್ಕೆ ಬೇಕಾಗುವ ಸ್ವಲ್ಪ ಸಾಮಾನುಗಳನ್ನು ತೆಗೆದುಕೊಂಡು ಬರಬೇಕು ಪುನಃ ಪೇಟೆಗೆ ಹೋಗಿ ವಸ್ತ್ರವನ್ನು ಯೋಗ್ಯಬೆಲೆಗೆ ಹಿಂದಿನಿಂದ ಮಾರಬೇಕು" ಎಂದು ಮೀನಾಕ್ಷಿಯು ಸೂಚಿಸಿದಳು.

"ಒಳ್ಳೇ ಮಾತು ಹೇಳಿದೆ ಹಾಗಯೇ ಮಾಡೋಣ. ಆದರ ತಿನ್ನುವ ಮಾತು ತೆಗೆದ ಕೂಡಲೆ ಹಸಿವಯು ಹೇಗೆ ಹೆಚ್ಚಾಯಿತು ನೋಡು. ಯಾಕೆ, ಮನೆಯಲ್ಲಿ ಏನಾದರೂ ತಿನ್ನಲು ಇರುವದೆ?"

ಮೀನಾಕ್ಷಿಯು 'ಉಶ್'ಎಂದು ದೀರ್ಘವಾಗಿ ಉಸುರ್ಗರೆದು ತಲೆಅಲ್ಲಾಡಿಸುತ್ತ ದುಃಖದ ಭರದಿಂದ "ಮನೆಯಲ್ಲಿ ಏನೂ ಇಲ್ಲ" ಎಂದು ಸೂಚಿಸಿದಳು.

"ಅಂಥ ಇಂಥ ಹಿಟ್ಟಾದರೂ ನಡೆಯುವದು. ನೋಡು, ಏನಾದರೂ ಇದ್ದೀತು—"

"ಇಲ್ಲ-ಒಂದು ಹಿಡಿಯಷ್ಟೂ ಇಲ್ಲವು!"

ಧನಪತಿಯು ಖಿನ್ನತೆಯಿಂದಲೇ ನಕ್ಕು: "ಒಳ್ಳೇದು. ಇಲ್ಲದಿದ್ದರೆ ಇಲ್ಲ. ಅದಕ್ಕೊಂದು ಯುಕ್ತಿಯು ನನಗೆ ಹೊಳೆಯುತ್ತದೆ. ಈ ನಿನ್ನ ಅಧರಾಮೃತ ವನ್ನು ಪಾನಮಾಡಿ ನನ್ನ ಹಸಿವೆಯನ್ನು ಹಿಂಗಿಸುವೆನು. ಅಂದರಾಯಿತು."

ಆಗ ಮೀನಾಕ್ಷಿಯು ನಗುತ್ತ: "ಅಮೃತವು ಸಹ ಹಸಿದ ಹೊಟ್ಟೆಗೆ ರುಚಿ ಹತ್ತುವದಿಲ್ಲ!"

"ಇಲ್ಲ. ನನಗಂತೂ ಬಹು ರುಚಿ ಹತ್ತಿತು. ಹಸಿವೆಯು ಹಿಂಗಿತು!" ಎಂದು ಧನಪತಿಯು ಉತ್ತರಕೊಟ್ಟನು.

ಕೆಲವು ಕ್ಷಣಗಳ ಮೇಲೆ ಮೀನಾಕ್ಷಿಯು ಹತ್ತರವಿದ್ದ ಹಣವನ್ನೂ ಒಂದು ದೋತರವನ್ನೂ ಕೊಟ್ಟು ಧನಪತಿಯನ್ನು ಪೇಟೆಗೆ ಕಳಿಸಿದಳು. ಅಷ್ಟೊತ್ತಿಗೆ ಸಂತೆಯು ಚನ್ನಾಗಿ ಕೂಡಿತ್ತು. ಹತ್ತರವಿದ್ದ ಹಣದಿಂದ ಧನಪತಿಯು ಆ ದಿನ ಯಥೇಚ್ಛೆಯಾಗಿ ಪದಾರ್ಥಗಳನ್ನೂ ಮಿರಾಯಿಗಳನ್ನೂ ಕೊಂಡು ಕೊಂಡು ಮನೆಗೆ ಬಂದನು. ಮೀನಾಕ್ಷಿಯು ಸ್ನಾನಮಾಡಿ ಅಡಿಗೆಯ ಕಾರ್ಯ ದಲ್ಲಿ ಮಗ್ನಳಾಗಿದ್ದಳು.

ಇತ್ತ ಧನಪತಿಯು ಮಗ್ಗದ ಅರಿವೆಯನ್ನು ಬಗಲಲ್ಲಿ ಇಟ್ಟುಕೊಂಡು. ಸಂತೆಯು ನೆಟ್ಟಗೆ ಕೂಡಿದೆ. ಇದನ್ನು ಬೇಗನೆ ಮಾರಿಕೊಂಡವನೇ ತಿರುಗಿ ಬರುತ್ತೇನೆ. ಆ ಮೇಲೆ ನಾವಿಬ್ಬರೂ ಕೂಡಿಯೇ ಊಟಮಾಡೋಣ. ನೀನು ನಿನ್ನ ಕೆಲಸವನ್ನು ಬೇಗನೆ ಪೂರೈಸೆಂದರಾಯಿತು." ಎಂದನು

"ಹಾಗೇ ಆಗಲಿ. ಬೇಗನೆ ಮಾತ್ರ ಬನ್ನಿರಿ—"

ಅಲ್ಪಾವಧಿಯಲ್ಲಿಯೇ ಧನಪತಿಯ ಸುದೈವದಿಂದ ಅವನ ಅರಿವೆಯು ಅವನ ಇಚ್ಛೆಗಿಂತಲೂ ಹೆಚ್ಚಿನ ಹಣಕ್ಕೆ ಮಾರಿತು.

ಆ ಹೆಚ್ಚಿನ ಹಣದಿಂದ ಇನ್ನೂ ಕೆಲವು ಪದಾರ್ಥಗಳನ್ನು ಕೊಂಡು ಕೊಂಡು ಧನಪತಿಯು ಬಹು ಹರ್ಷಭರಿತನಾಗಿ ಮನೆಗೆ ಬಂದು ಯಾವತ್ತು ಸಂಗತಿಯನ್ನು ಮೀನಾಕ್ಷಿಗೆ ತಿಳಿಸಿದನು; ಹಾಗು "ಸ್ನಾನ ಮಾಡಿ ಬರುವೆನು" ಎಂದು ಅನ್ನುತ್ತ ಪಂಜೆಯನ್ನು ಹೆಗಲಮೇಲೆ ಹಾಕಿಕೊಂಡು ನದಿಯ ಕಡೆಗೆ ಲಗುಬಗೆಯಿಂದ ಹೊರಟು ಹೋದನು.

ಪಾಕ ಸಿದ್ಧಿಯಾಗಿದೆ, ಎಂದು ಮೀನಾಕ್ಷಿಯು ತನ್ನ ಪತಿರಾಯನಿಗೆ ಹೇಳಿದರೂ ಅಂಥಿಂಥ ಕಿರಕುಳ ಸಾಹಿತ್ಯಗಳನ್ನು ಸರಿಪಡಿಸತಕ್ಕದ್ದಿತ್ತು; ಸ್ವಲ್ಪ ಕಾಲದಲ್ಲಿಯೇ ಅವಳು ಯಾವತ್ತು ಕೆಲಸಗಳನ್ನು ತೀರಿಸಿಕೊಂಡಳು. ಮಾಡಿದ ಪದಾರ್ಥಗಳು ಬಿಸಿ ಬಿಸಿ ಇರುವಾಗಲೇ ಪತಿರಾಯನ ಬಾಯಿಯಲ್ಲಿ ಬೀಳಬೇಕೆಂದು ಬಯಸಿ, ಆ ಪತಿ-ಪ್ರಾಣ ಸಾಧ್ವಿಯು ಆ ಪದಾರ್ಥಗಳನ್ನು ಒಲೆಯ ಮೇಲೆಯೇ ಇಟ್ಟು ಶಕ್ಯವಿದ್ದಮಟ್ಟಿಗೆ ಬಿಸಿಬಿಸಿಯಾಗಿರುವಂತೆ ವ್ಯವಸ್ಥೆ ಮಾಡಿದಳು.

ಯಾವತ್ತೂ ಸಿದ್ಧತೆಯು ಪೂರೈಸಿತು ಚಟ್ಟಣಿ, ಕೋಸಂಬರಿ, ರಸ ಮೊದಲಾದ ಬೇಕಂತ ತಯಾರಿಸಿದ ಪದಾರ್ಥಗಳನ್ನು ಅಂದವಾಗುವಂತೆ ಬಡಿಸಿಟ್ಟಳು. ಆ ದಿನವು 'ಗೃಹಪೂರ್ಣ'ದ ಹಬ್ಬವಾದುದರಿಂದ ಮೀನಾಕ್ಷಿಯು ಪತಿಯು ಎಲೆಯ ಸುತ್ತಲೂ ಚಂದಕಾಣುವಂತೆ ರಂಗವಲ್ಲಿಯನ್ನು ಹಾಕಿದಳು. ಇಷ್ಟೆಲ್ಲ ಮಾಡುವದರಲ್ಲಿ ಬಹಳ ವೇಳೆ ಕಳೆದರೂ ಧನಪತಿಯ ಸುದ್ದಿಯೇ (ಸುಳಿವೇ) ಇರಲಿಲ್ಲ. ಈಗ ಬರಬಹುದು, ಇನ್ನೊಂದು ಘಳಿಗೆಗೆ ಬರಬಹುದು, ಎಂದು ಪತಿಯು ಮಾರ್ಗಪ್ರತೀಕ್ಷೆ ಮಾಡುತ್ತ ಮೀನಾಕ್ಷಿಯು ಕುಳಿತುಕೊಂಡಳು. ಮೀನಾಕ್ಷಿಯ ಕಿವಿಗಳು ಧನಪತಿಯ ಹೆಜ್ಜೆಗಳ ಸಪ್ಪಳದ ಕಡೆಗೇ ಮಗ್ನವಾಗಿದ್ದವು.

ಇನ್ನೂ ಕೆಲವು ಕ್ಷಣಗಳು ಗತಿಸಿದವು. ಆದರೂ ಧನಪತಿಯು ಸುಳಿವೇ ಇಲ್ಲದಾಯಿತು. ಇದೇನು ಚಮತ್ಕಾರವು? ನದಿಯಲ್ಲಿ ಎರಡು ಸಾರೆ ಮುಳುಗು ಹಾಕಿ ಬರಲಿಕ್ಕೆ ಇಷ್ಟು ವೇಳೆ ಬೇಕೆ? ಆತನು ಆ ದಿನ ಮಾಡಿದ ವಿಲಂಬಕ್ಕಾಗಿ ಮೀನಾಕ್ಷಿಗೆ ಆಗ ಸ್ವಲ್ಪ ಸಿಟ್ಟೂ ಬಂದಿತು. ಒಳಗಿನಿಂದ ಹೊರಗೆ ಹೊರಗಿನಿಂದ ಒಳಗೆ ಈ ರೀತಿ ಪ್ರತಿ ಕ್ಷಣಕ್ಕೆ ಮೀನಾಕ್ಷಿಯು ಎಡತಾಕ ಹತ್ತಿದಳು. ಹೊಟ್ಟೆಯಲ್ಲಿ ಡೊಂಬರು ಆಡುತ್ತಿರುವಾಗ, ನದಿಯಲ್ಲಿ ಈ ರೀತಿ ಸ್ವಚ್ಛಂದವಾಗಿ ಮುಳುಗುತ್ತ ಕಾಲಹರಣ ಮಾಡುವದು ಯುಕ್ತವೇ? ವೇಳೆ-ಅವೇಳೆಯ ವಿಚಾರವು ಬೇಡವೇ? ಎಂದು ಮೀನಾಕ್ಷಿಯು ಮನದಲ್ಲಿ ಹಲವು ರೀತಿಯಿಂದ ಕುದಿಯುತ್ತಿದ್ದಳು. ಮೀನಾಕ್ಷಿಯು ಬಾಗಿಲಿಗೆ ಬಂದು ನಿಂತುಕೊಂಡು ಬಹು ಉತ್ಕಂಠಿತಳಾಗಿ ದೂರದ ವರೆಗೆ ಪತಿಯು ದಾರಿಯನ್ನು ನೋಡುತ್ತ ನಿಂತುಕೊಂಡಳು.

ಹೀಗೆಯೇ ಅವಳು ನಿಂತು ನಿಂತಿರಲಿಕ್ಕೆ ಕೆಲವು ಕ್ಷಣಗಳು ಹಾರಿದವು. ಆದರೂ ಮೀನಾಕ್ಷಿಯ ಪತಿರಾಜನು ತಿರುಗಿ ಬರಲಿಲ್ಲ. ಮೀನಾಕ್ಷಿಯ ಮನಸ್ಸು

ಈಗ ಚಂಚಲವಾಯಿತು. ಅವಳಿಗೆ ಚಮತ್ಕಾರವೆನಿಸಹತ್ತಿತು. ಇಲ್ಲದ-ಸಲ್ಲದ ಚಿಂತಾ ವಿಚಾರಗಳು ತಲೆಯೆತ್ತಹತ್ತಿದವು. ಪತಿಯ ಶೋಧಕ್ಕಾಗಿ ನದಿಗೆ ಹೋಗಬೇಕೆಂದು ಅವಳು ಮನದಲ್ಲಿ ನಿರ್ಧರಿಸಿದಳು.

ಇಷ್ಟರಲ್ಲಿಯೇ ದೂರದಲ್ಲಿ ಎಂಥದೋ ಗದ್ದಲವಾಗುತ್ತಿರುವದು ಅವಳಿಗೆ ಭಾಸವಾಯಿತು ಅವಳು ಕೂಡಲೆ ಬೆಚ್ಚಿಬಿದ್ದಳು! ಯಾಕೆ ಬೆಚ್ಚಿಬಿದ್ದಳೆಂಬದನ್ನು ಆ ಸರ್ವಜ್ಞಮೂರ್ತಿಯೇ ಬಲ್ಲನು! ಮೀನಾಕ್ಷಿಯ ಹೃದಯದಲ್ಲಿ ಒಮ್ಮಿಂದೊಮ್ಮೆ ಭಯಾನಕವಾದ ಸ್ಫೋಟವಾಯಿತು!

ಆ ಗೊಂದಲವು ಹೆಚ್ಚೆಚ್ಚು ಸಮೀಪದಲ್ಲಿಯೇ ಕೇಳಬರಹತ್ತಿತು. ಆಶ್ಚರ್ಯ ಮತ್ತು ಭೀತಿಸೂಚಕವಾದ ಉದ್ಗಾರಗಳು ಮೀನಾಕ್ಷಿಯ ಬಾಯಿಂದ ಹೊರಬಿದ್ದವು. ಬಾಗಿಲಲ್ಲಿಯೇ ನಿಂತ ಮೀನಾಕ್ಷಿಯು ಕೂಡಲೆ ಓಡುತ್ತ ಮುಂದೆ ಹೋದಳು

ಪಾಪ! ಎಂಥ ಹೃದಯದ್ರಾವಕ ದೃಶ್ಯವದು! ಮೀನಾಕ್ಷಿಯು ಹತಭಾಗಿನಿಯು-ದುರ್ದೈವಿಯು! ಅವಳು ನೋಡುವದೇನು?

ನಾಲ್ಕಾರು ಜನ ನೆರೆಹೊರೆಯವರು ರಕ್ತಮಯವಾದ ವಸ್ತ್ರಗಳಿಂದ ಆಚ್ಛಾದಿಸಲ್ಪಟ್ಟ ಎಂಥದೋ ಪದಾರ್ಥವನ್ನು ಹೊತ್ತುಕೊಂಡು ತಮ್ಮ ಚಪ್ಪರದ ಕಡೆಗೇ ಬರುತ್ತಿರುವದನ್ನೂ ಹಾಗೂ ಆ ಜನರ ಹಿಂದಿನಿಂದ ಅನೇಕ ಜನರ ತಂಡವು ತನ್ನ ಕಡೆಗೇ ಬರುತ್ತಿರುವುದನ್ನೂ ಮೀನಾಕ್ಷಿಯು ತನ್ನ ಚಂಚಲವಾದ ನೇತ್ರಗಳಿಂದ ನೋಡಿದಳು.

ಅವಳು ವ್ಯೆಮರತು ಹಾಗಯೇ ಮುಂದಕ್ಕೆ ಧಾವಿಸಿದಳು ಆ ಪದಾರ್ಥವು ಧನಪತಿಯ ಆರಕ್ತ ಶರೀರವು! ಶಸ್ತ್ರದ ಆಘಾತವಾದ್ದರಿಂದ ಆ ಶರೀರದಿಂದ ಒಂದೇಸವನೆ ರಕ್ತವು ಹೊರಚಲ್ಲುತ್ತಿತ್ತು! ರಕ್ತಮಯವಾದ ಆ ಪದಾರ್ಥವು ಧನಪತಿಯ ಮೃತಶರೀರದ್ದಾಗಿದ್ದಿತು! ಆ ದೇಹದಿಂದ ಪ್ರಾಣಚೈತನ್ಯವು ಯಾವಾಗಲೋ ಹೊರಟುಹೋಗಿತ್ತು!!

"ಹಾಯ್! ಹಾಯ್!! ದುರ್ದೈವವೇ!!!" ಎಂದು ಭಯಂಕರವಾಗಿ ಚೀರಿ, ಮೀನಾಕ್ಷಿಯು ತಾನು ನಿಂತ ಸ್ಥಳದಲ್ಲಿಯೇ ಸಿಡಿಲು ಬಡೆದ ಬಾಳೆಯ ಮರದಂತೆ ಒಮ್ಮೆಲೆ ಮೂರ್ಛಿತಳಾಗಿ ಬಿದ್ದಳು!

(೩)

. . .

ಈ ಭಯಂಕರವಾದ ಆಕಸ್ಮಿಕ ಘಟನೆಯು ಹೇಗೆ ಸಂಭವಿಸಿತೆಂಬದನ್ನು ನಮ್ಮ ವಾಚಕರಿಗೆ ಅರುಹುವದು ಯುಕ್ತವು.

ಧನಪತಿಯು ಸ್ನಾನಕ್ಕೆಂದು ನದಿಗೆ ಹೋಗಿದ್ದನಷ್ಟೆ, ಅವನು ಹೋದ ಸ್ಥಳಕ್ಕೆ ಹೊಂದಿ ನಿಬಿಡವಾದ ಅರಣ್ಯದ ಒಂದು ಭಾಗವಿದ್ದಿತು. ಆ ಕಟ್ಟಡವಿಯಲ್ಲಿ ಬೇಟೆಯಾಡಲಿಕ್ಕೆಂದು ವಿಜಯನಗರದ ರಾಜಕುಮಾರನಾದ ಕೃಷ್ಣರಾಯನೂ, ಆತನ ಮೂರು ನಾಲ್ಕು ಜನ ತರುಣಮಿತ್ರರೂ ದಯಮಾಡಿಸಿದ್ದರು. ಅವರ ಛಾವಣಿಯು ಅಲ್ಲಿಂದ ಬಹು ದೂರದಲ್ಲಿದ್ದಿತು. ಈ ದಿನ ಮುಂಜಾವಿನಲ್ಲಿಯೇ ಈ ಮಂಡಲವು ಬೇಟೆಗಾಗಿ ಹೊರಬಿದ್ದಿತ್ತು. ಆದರೆ ಬಹು ಕಾಲದ ವರೆಗೆ ಇವರಿಗೆ ಚಲೋ ಬೇಟೆಯು ಸಿಗಲಿಲ್ಲವು. ಬಹು ವೇಳೆಯ ವರೆಗೆ ಅತ್ತಿಂದಿತ್ತ ಇತ್ತಿಂದತ್ತ ಬೇಟೆಯಿಲ್ಲದೆ ತಿರುಗಾಡಿದ ಮೇಲೆ ಸುದೈವದಿಂದ ರಾಜಕುಮಾರನ ದೃಷ್ಟಿಗೆ ಒಂದು ಸುಂದರವಾದ ಚಿಗರೆಯು ಬಿದ್ದಿತು. ರಾಜಕುಮಾರನಾದ ಕೃಷ್ಣರಾಯನು ಬಿಸಲಿನ ತಾಪದಿಂದ ಅತಿಶಯವಾಗಿ ಕಳವಳಗೊಂಡಿದ್ದನು. ಆದರೂ ಬೇಟೆಯು ಕಣ್ಣಿಗೆ ಬಿದ್ದೊಡನೆಯೇ ಆತನು ಬಹು ಉಲ್ಹಾಸದಿಂದ ಅದರ ಹಿಂದೆ ತನ್ನ ಕುದುರೆಯನ್ನು ಹಾಕಿದನು. ಸ್ವಲ್ಪ ವೇಳೆಯಲ್ಲಿಯೇ ರಾಜಕುಮಾರನು ಆ ಬೇಟೆಯ ಪ್ರಾಣವನ್ನು ಹೀರಿದನು. ಅವನ ಸಹವಾಸಿಗಳು ಸಹ ಅವನ ಶೋಧ ಮಾಡುತ್ತ ಅಲ್ಲಿಗೇ ಬಂದು ಮುಟ್ಟಿದರು.

ಉತ್ಸಾಹಭರದಲ್ಲಿ ಆ ಮಂಡಲಿಯು ಬಹು ದೂರದ ವರೆಗೆ ಬಂದಿತ್ತು. ನವಕರ-ಚಾಕರರು ಆ ಘನವಾದ ನಿಬಿಡಾರಣ್ಯದಲ್ಲಿ ಎಲ್ಲೆಲ್ಲಿಯೋ ಗುಪ್ತರಾಗಿದ್ದರು. ಅದರಲ್ಲಿ ಅವರನ್ನು ಶೋಧಿಸಿ ತೆಗೆಯುವದು ಪರಮ ದುಸ್ತರ ಸಂಗತಿಯಾಗಿತ್ತು. ಅವನು ತನ್ನ ಛಾವಣಿಗೆ ಹೋಗಲಿಕ್ಕೆ ಬಹು ಉತ್ಕಂಠಿತನಾಗಿದ್ದನು, ಆದರೆ ಇಷ್ಟು ಆಯಾಸದಿಂದ ಹೊಡೆದ ಬೇಟೆಯ ಮೋಹವು ಹೋಗುವದೆಂತು?

ಆತನು ಆಶಾವಿಷ್ಟನಾಗಿ ಸುತ್ತಲೂ ದೂರದ ವರೆಗೆ ನೋಡಿದನು. ಸ್ವಲ್ಪ ಅಂತರದಲ್ಲಿಯೇ ನದಿಯ ಆಚೆಯ ದಂಡೆಯಲ್ಲಿ ಒಬ್ಬನು ಸ್ನಾನ ಮಾಡಿ ಮನೆಯ ದಾರೀ ಹಿಡಿದಿದ್ದನು. ರಾಜಕುಮಾರನ ಆಜ್ಞೆಯ ಮೇಲಿಂದ ಆತನ ಸಂಗಾಡಿಗರಲ್ಲೊಬ್ಬನು ಆ ಮನುಷ್ಯನನ್ನು ಗಟ್ಟಿಯಾಗಿ ಕೂಗಿ ಕರೆದನು.

ಆ ಮನುಷ್ಯನೇ ನಮ್ಮ ಕಥೆಯ ಧನಪತಿಯೆಂಬುದು ನಮ್ಮ ವಾಚಕರಿಗೆ ಈಗಲೇ ಅರಿಕೆಯಾಗಿರಬಹುದು. ವೀರರಿಗೆ ಉಚಿತವಾದ ವೇಷಗಳನ್ನು ಧರಿಸಿ ಸಜ್ಜಾದ ತರುಣ ಸ್ವಾರನನ್ನು ನೋಡಿ ಧನಪತಿಯು ಅವನ ಹತ್ತರ ಹೋದನು.

ಅವನ ಹತ್ತರ ಬಂದಕೂಡಲೆ ಕೃಷ್ಣರಾಯನು. "ಇದು ನೋಡು. ಇಲ್ಲಿಂದ ಒಂದು ಹರದಾರಿಯ ಮೇಲೆ ನಮ್ಮ ಛಾವಣಿ ಬಿಟ್ಟಿದೆ. ನಮ್ಮ ನವ ಕರರು ಅಡವಿಯಲ್ಲಿ ತಪ್ಪಿಸಿಕೊಂಡಿರುತ್ತಾರೆ. ನೀನು ಈ ಬೇಟೆಯನ್ನು ಹೊತ್ತುಕೊಂಡು ನಮ್ಮ ಛಾವಣಿಯ ವರೆಗೆ ನಡೆ. ಅಂದರೆ ನಿನಗೆ ಯೋಗ್ಯ ಪಾರಿತೋಷಕವು ಸಿಗುವದು!" ಎಂದು ಹೇಳಿದನು.

ಧನಪತಿಯು ಆಗ ದಣಿದಿದ್ದನು, ಹಸಿದಿದ್ದನು. ಅಂಥ ವೇಳೆಯಲ್ಲಿ ಅವನಿಗೆ ರಾಜಮರ್ಯಾದೆಗೆ ಯೋಗ್ಯದಾಗುವಂಥ ನಮ್ರವಾದ ಮಾತುಗಳು ಎಲ್ಲಿಂದ ಸೂಚಿಸಬೇಕು?

ಧನಪತಿಯು ತಲೆ ಅಲ್ಲಾಡಿಸುತ್ತ: "ಇಲ್ಲ ಸ್ವಾಮಿ, ನಾನು ಈ ಕೆಲಸ ವನ್ನು ಮಾಡಲಾರೆನು!" ಎಂದು ಉತ್ತರಕೊಟ್ಟನು.

ರಾಜಪುತ್ರನಾದರೂ ಬಿಸಿ ನೆತ್ತರದ ತರುಣನು. ಬಿಸಿಲಿನ ತಾಪದಿಂದಲೂ, ಶ್ರಮದಿಂದಲೂ ಆತನು ಬಹು ದಣಿದು ಹೈರಾಣಾಗಿದ್ದನು ಅವನ ಮನಸ್ಸು ಸಹ ವಿಕಾರ ವಶವಾಗಿತ್ತು. ತನ್ನ ಒಬ್ಬ ಯಃಕಶ್ಚಿತ ಅನಾಮಧೇಯ ಪ್ರಜೆಯು, ತನ್ನ ಅಜ್ಞೆಯನ್ನು ಇಷ್ಟು ತುಚ್ಛ ರೀತಿಯಿಂದ ಉಲ್ಲಂಘಿಸಿ ಮಾಡಿದ ಅವ ಮಾನವನ್ನು ಯುವರಾಜನು ಸಹಿಸದಾದನು ರಾಜಪುತ್ರನು ಕೂಡಲೆ ಸಿಟ್ಟಿನಿಂದ ಬೆಂಕಿಯಾಗಿ ಅವಾಚ್ಯ ಬೈಗಳನ್ನು ಉಚ್ಚರಿಸುತ್ತ ಧನಪತಿಯ ಟೊಂಕಕ್ಕೆ ಒದ್ದನು.

ಧನಪತಿಯೂ ಹೊಸ ರಕ್ತದ ತೇಜಸ್ವೀ ತರುಣನೇ ಆಗಿದ್ದನು. ಅವನಾ ದರೂ ಈ ಅನ್ಯಾಯವನ್ನು ಸಹಿಸಲಾರದವನಾದನು. ಅವನೂ ಎದ್ದವನೇ ಕ್ರೋಧಾವೇಶದಿಂದ ರಾಜಪುತ್ರನಿಗೆ ಬೆಯ್ದನು!

ರಾಜಕುಮಾರನು ಸಂಪೂರ್ಣವಾಗಿ ಕ್ರೋಧವಶನಾದನು. ಹಿಂದು ಮುಂದಿನ ವಿಚಾರವಿಲ್ಲದೆ ಆತನು ತನ್ನ ಕೈಯಲ್ಲಿದ್ದ ಭಾಲೆಯಿಂದ ಧನಪತಿಯ ಎದೆಯ ಮೇಲೆ ಒತ್ತರದಿಂದ ಇರಿದನು! ರಾಜಪುತ್ರನ ಸಂಗಾಡಿಗರೂ ಅವನ ಅನುಕರಣಮಾಡಿ ತಮ್ಮ ಖಡ್ಗಗಳಿಂದ ಧನಪತಿಯ ಮೇಲೆ ಪ್ರಹಾರ ಮಾಡಿ ದರು. ತೀಕ್ಷ್ಣವಾದ ಶಸ್ತ್ರಗಳಿಂದ ಗಾಯಹೊಂದಿದ ಧನಪತಿಯ ಶರೀರವು

ಕ್ಷಣಾರ್ಧದಲ್ಲಿ ನೆಲಕ್ಕೆ ಉರುಳಿತು! ಧನಪತಿಯ ಅಂತರಾತ್ಮನು ಈ ದುಃಖ ಮಯ-ಸುಖಮಯ ಜಗತ್ತಿನಿಂದ ಪರಲೋಕವನ್ನೈದಿದನು!!

ಅಷ್ಟರಲ್ಲಿ ನಾಲ್ಕಾರುಜನ ಧನಪತಿಯ ನೆರೆಹೊರೆಯವರೂ ಮಿತ್ರರೂ ಸ್ನಾನ ಕ್ಕಾಗಿ ನದಿಗೆ ಬಂದಿದ್ದರು. ಆ ಭಯಂಕರವಾದ ಪ್ರಸಂಗವನ್ನು ನೋಡಿ ಅವರು ಕೂಡಲೆ ಆ ಸ್ಥಳಕ್ಕೆ ಬಂದೊದಗಿದರು; ಆದರೆ ಆ ಪ್ರಾಣಿಗಳು ಮಾಡುವ ದೇನು? ಅವರು ಮೂಢ ಹಳ್ಳಿಗಾಡ ಜನರು. ನಿಶ್ಶಸ್ತ್ರರು ದೀನದರಿದ್ರರು. ಎದುರಿಗೆ ಕ್ರೋಧೋನ್ಮತ್ತರೂ ತರುಣರೂ ಆಯುಧಪಾಣಿಗಳೂ ಆದ ಸ್ವಾರರು. ಆ ಜನರು ಕೂಡಲೆ ಹೆದರಿ ನಾಲ್ಕು ಹೆಜ್ಜೆ ಹಿಂದಕ್ಕೆ ಸರಿದರು. ರಾಜಪುತ್ರನ ಸವಾರಿಯು ತನ್ನ ಮಿತ್ರರನ್ನೊಡಗೂಡಿ ಬಹು ಆನಂದದಿಂದ ತನ್ನ ಛಾವಣಿಯ ಕಡೆಗೆ ಸಾಗಿತು.

ರಾಜಪುತ್ರನೂ ಆತನ ಪರಿವಾರದವರೂ ತಮ್ಮ ಛಾವಣಿಯ ಕಡೆಗೆ ಹೊರಟು ಹೋದನಂತರ ಧನಪತಿಯ ಛಿನ್ನ ವಿಚ್ಛಿನ್ನವಾದ ಮೃತದೇಹವನ್ನು ಎತ್ತಿಕೊಂಡು ಅವನ ನೆರೆಹೊರೆಯವರು ಅವನ ಮನೆಗೆ ಬಂದರು. ಧನಪ ತಿಯು ತನ್ನ ಅನೇಕ ಗುಣಸಮುಚ್ಚಯದಿಂದ ಆ ಊರ ಯಾವತ್ತು ಜನರಿಗೂ ಬಹು ಪ್ರಿಯವಾಗಿದ್ದನು. ಅವನ ಆ ಶೋಕಜನಕ ಅಕಾಲಮೃತ್ಯುವಿನಿಂದ ಸರ್ವರಿಗೂ ಪರಮ ವಿಷಾದವಾಯಿತು. ಧನಪತಿಯ ಮರಣದ ಅಮಂಗಲ ಕರವಾದ ವಾರ್ತೆಯು ಕಿವಿಗೆ ಬಿದ್ದೊಡನೆಯೇ ಅವನ ನೆರೆಹೊರೆಯ ಹೆಣ್ಣು ಮಕ್ಕಳು ಮೀನಾಕ್ಷಿಯ ಸಮಾಚಾರಕ್ಕಾಗಿಯೂ ಸಾಂತ್ವನಕ್ಕಾಗಿಯೂ ಓಡಿ ಬಂದರು, ಮತ್ತು ಮೂರ್ಛಿತಳಾಗಿ ಬಿದ್ದ ಮೀನಾಕ್ಷಿಯ ಶುಶ್ರೂಷೆಯನ್ನು ಬಹು ಕಳಕಳಿಯಿಂದ ಮಾಡಿದರು.

ಇದೇ ಸ್ಥಿತಿಯಲ್ಲಿ ಎರಡು ದಿನಗಳು ಕಳೆದವು. ಮೀನಾಕ್ಷಿಯ ನೆರೆ ಹೊರೆಯವರೂ ಅವಳ ಗೆಳತಿಯರೂ ಬಹು ಕಷ್ಟದಿಂದ ನಡು-ನಡುವೆ ಅವಳ ಬಾಯಿಯಲ್ಲಿ ಸವಟಿನಿಂದ ಹಾಲು ಹಾಕುತ್ತಿದ್ದರು. ಆದರಿಂದ ಆ ದುರ್ದೈವಿ ಮೀನಾಕ್ಷಿಯ ಜೀವಧಾರಣೆಯಾಯಿತು!

ಕ್ರಮದಿಂದ ಮೀನಾಕ್ಷಿಯ ಪ್ರಬಲವಾದ ಮೂರ್ಛೆಯು ತಿಳಿಯಿತು. ಹೃದಯವನ್ನು ಇಬ್ಭಾಗಮಾಡುವ ದಾರುಣವಾದ ಶೋಕದ ಉದ್ದಾಮವಾದ ಆವೇಗವೂ, ಪ್ರಚಂಡತೆಯೂ ಕಾಲಗತಿಯಿಂದ ಕಡಿಮೆಯಾದವು. ಆ ಶೋಕಸಾಗರಕ್ಕೆ ಭರತಿಯು ನೀಳಿಯು ತೀರಿ, ಓಟಬಿಯು ಪ್ರಾರಂಭವಾ

ಬಿತು. ಜನರು ಮಾತಾಡಿದ ಸಂಗತಿಗಳನ್ನು ಕೇಳಿಕೊಳ್ಳಲಿಕ್ಕೂ ಮತ್ತು ತಿಳಿದುಕೊಳ್ಳಲಿಕ್ಕೂ ಕ್ರಮವಾಗಿ ಮೀನಾಕ್ಷಿಗೆ ಶಕ್ತಿ ಬಂದಿತು. ಆ ಕಾಲದಲ್ಲಿ ಏನೇನು ಸಂಭವಿಸಿತೆಂಬದು ಅವಳಿಗೆ ತಿಳಿದು ಬಂದಿತು.

ರಂಗಮ್ಮನು ಮೀನಾಕ್ಷಿಯ ಬೆನ್ನಮೇಲೆ ಸ್ನೇಹ ಭರದಿಂದ ಕೈಯಾಡಿ ಸುತ್ತ: "ಮೀನಾಕ್ಷಿ, ರಾಜಪುತ್ರನೇ ಪ್ರಜೆಯನೊಬ್ಬನ ವಧ ಮಾಡಿದ ಮೇಲೆ ಆ ಅನ್ಯಾಯದ ವಿಚಾರವನ್ನು ಮಾಡುವರಾರು?"

ರಂಗಮ್ಮನ ಈ ನ್ಯಾಯಮೀಮಾಂಸೆಯ ಕಡೆಗೆ ಮೀನಾಕ್ಷಿಯ ಲಕ್ಷ್ಯವಿದ್ದಂತೆ ತೋರಲಿಲ್ಲ. ಕ್ಷಣಹೊತ್ತು ಸುಮ್ಮನಿದ್ದು ಮೀನಾಕ್ಷಿಯು— "ಅಕ್ಕಾ, ಅವರು ಈ ಅಖಿಲ ಜಗತ್ತಿನಲ್ಲಿ ಯಾವ ಪ್ರಾಣಿಗಾದರೂ ಎಂದಾದರೂ ಅಪಾಯ ಮಾಡಿದ್ದರೇ? ಅಪರಾಧ ಮಾಡಿದ್ದರೇ? ಅಂದಮೇಲೆ ರಾಜಕುಮಾರನು ಅವರನ್ನು ಯಾಕೆ ಕೊಂದಿರಬೇಕು? ಅವ್ವಯ್ಯಾ, ಅವರಿಗಂತೂ ಅತಿಶಯವಾದ-ಭಯಂಕರವಾದ ಹಸಿವೆಯಾಗಿತ್ತು! ಅಕ್ಕಾ, ಮನೆಯಲ್ಲಿ ಅವರ ಪ್ರೀತಿಯ ಪದಾರ್ಥಗಳನ್ನು ತಯಾರಿಸಿ ಇಟ್ಟಿದ್ದೆನು. ಅಹಹಾ!..........."

ಒಬ್ಬ ನೆರೆಹೊರೆಯ ಮುದುಕಿಯು ಮೀನಾಕ್ಷಿಯ ಭೆಟ್ಟಿಗೆಂದು ಬಂದವಳು ಉದ್ವೇಗದಿಂದ. "ಮಗಳೇ, ಈ ಯಾವತ್ತೂ ಸಂಗತಿಗಳ ವಿಷಯವಾಗಿ ವಿಚಾರ ಮಾಡಿ ಮಾಡಿ ಮನಸ್ಸಿಗೆ ಮತ್ತಿಷ್ಟು ಹೆಚ್ಚಿನ ದುಃಖದ ಯಾತನೆಗಳನ್ನು ಯಾಕೆ ಹಚ್ಚಿಕೊಳ್ಳುತ್ತಿ?" ಎಂದು ಮಾತಾಡಿದಳು.

ಮೀನಾಕ್ಷಿಯು ಏನೂ ಮಾತಾಡದೆ ಒಂದೇಸವನೇ ಬಿಕ್ಕಿ ಬಿಕ್ಕಿ ಅಳಹತ್ತಿದನು.

ಮುದುಕಿಯು ಮತ್ತೆ ಮಾತಾಡಹತ್ತಿದಳು: "ಮೀನಾ, ನೀನು ತಿಳಿದವಳು. ವಿಚಾರಮಾಡಿ ನೋಡು. ನಮ್ಮಂಥ-ಅನಾಮಧೇಯರಿಗೆ ದೀನರಿಗೆ ನ್ಯಾಯದಾನ ಮಾಡುವವರಾರು? ಇವರು ದೊಡ್ಡ ಜನರಲ್ಲವೆ? ಹತ್ಯಮಾಡುವವರೇ ಅನ್ಯಾಯ ಅಪರಾಧಗಳನ್ನು ಮಾಡುವವರೇ ನ್ಯಾಯದಾನ ಮಾಡತೊಡಗಿದರೆ, ಪ್ರಜೆಗಳಿಗೆ ನಿಜವಾದ ನ್ಯಾಯವು ಎಂದಿಗಾದರೂ ಸಿಗುವದುಂಟೇ? ಅಲ್ಲದೆ ನಮ್ಮಂಥ ಯಃಕಶ್ಚಿತ ಜನರನ್ನು ಹಚ್ಚಿಕೊಳ್ಳುವವರಾರು?—ಆ ಜಗನ್ನಿಯಾಮಕನೊಬ್ಬನೇ ಅಲ್ಲವೆ?... ........"

ಧನಪತಿಯ ಖೂನಿನ ಬಗ್ಗೆ ಆ ಸಣ್ಣ ಹಳ್ಳಿಯಲ್ಲಿ ಗೊಂದಲವೆದ್ದಿತು! ಆ ಹಳ್ಳಿಯ ವಯೋವೃದ್ಧರಾದ ಮುಂದಾಳುಗಳು ಅನುಕೂಲರಾಗಿರದಿದ್ದರೂ, ಅಲ್ಲಿ

ಯ ತರುಣರು ಹತ್ತರದಲ್ಲಿಯೇ ಇದ್ದ ಪಟ್ಟಣಕ್ಕೆ ಹೋಗಿ ಆ ಪ್ರಾಂತದ ಮುಖ್ಯಾಧಿಕಾರಿಯ ಮುಂದೆ ಧನಪತಿಯ ಖೂನಿನ ವಿಷಯವಾಗಿ ಫಿರ್ಯಾದಿ ಕೊಟ್ಟರು. ಖೂನಿನ ಸಂಗತಿಗಳನ್ನು ಕೇಳಿ ಆ ಅಧಿಕಾರಿಯು ಸ್ತಂಭಿತನಾಗಿ ಹೋದನು! ಆದರೆ ಅವನಾದರೂ ಏನು ಮಾಡಿಯಾನು? ಗುನ್ಹೆಯ ಸ್ವರೂಪವು ಎಷ್ಟೇ ಭಯಂಕರವಿದ್ದರೂ ಅಪರಾಧಿಯು ಆ ದೇಶದ ರಾಜಪುತ್ರನು! ರಾಜಕುಮಾರನ ಮೇಲೆ ಒಬ್ಬ ಪ್ರಜೆಯ ಖೂನಿನ ಆರೋಪವು! ಈ ಫಿರ್ಯಾದಿಯಲ್ಲಿ ಆತನು ನ್ಯಾಯವನ್ನು ಕೊಡುವದೆಂತು? ಮೇಲಾಗಿ ಈ ಫಿರ್ಯಾದಿಯ ನಿರ್ಣಯವನ್ನು ಮಾಡಲಿಕ್ಕೆ ಆ ಅಧಿಕಾರಿಗೆ ಅಧಿಕಾರವಾದರೂ ಇದ್ದಿತೋ? ಬಹಳವಾದರೆ ಈ ಅತ್ಯಾಚಾರದ ವಿಷಯವಾಗಿ ಮಹಾರಾಜನಿಗೆ ಆತನು ತಿಳಿಸಬಹುದಾಗಿತ್ತು. ಅದಕ್ಕಿಂತಲೂ ಆತನು ಹೆಚ್ಚು ಏನು ಮಾಡಬಲ್ಲನು? ಆದರೆ ಮಹಾರಾಜನಿಗೆ ಈ ಸಂಗತಿಯನ್ನು ತಿಳಿಸುವಷ್ಟು ಸಾಹಸವನ್ನು ಮಾಡುವದು ಸಹ ಆ ಅಧಿಕಾರಿಗೆ ಅಶಕ್ಯಕೋಟಿಯ ಮಾತಾಗಿತ್ತು.

ಆ ಗೊಂದಲದ ಕಾಲದಲ್ಲಿ ಕೃಷ್ಣರಾಯನು ಯುವರಾಜನಾಗಿರದಿದ್ದರೂ- ಮಹಾರಾಜರ ತರುವಾಯ ಆ ಸಿಂಹಾಸನವನ್ನೇರುವದು ತೀರ ಅಸಂಭವನೀಯವಾದ ಮಾತಾಗಿರಲಿಲ್ಲ ಆತನೇ ಮುಂಗೆ ರಾಜನಾದರೆ ತನ್ನ ಗತಿ ಏನಾದೀತೆಂಬ ಭೀತಿಯು ಆ ಅಧಿಕಾರಿಯ ಮನವನ್ನು ಪೂರ್ಣವಾಗಿ ವ್ಯಾಪಿಸಿತು ತನ್ನ ಮೇಲೆ ಮಾಡಿದ ಈ ಫಿರ್ಯಾದಿಯನ್ನು ಕೃಷ್ಣರಾಯನು ಮರೆಯುವದು ಸಂಭವನೀಯವಾಗಿರಲಿಲ್ಲ! ಅಂದಮೇಲೆ ಈ ಸಾಹಸ ಮಾಡುವದು ಆ ಅಧಿಕಾರಿಗೆ ಯುಕ್ತವಾಗಿ ತೋರಲಿಲ್ಲ. ಅದರಿಂದ ಫಿರ್ಯಾದಿಯನ್ನು ಕೊಡಲು ಬಂದ ಆ ತರುಣರಿಗೆ ಆ ಅಧಿಕಾರಿಯು ಈ ಯಾವತ್ತು ವಿಚಾರಗಳನ್ನು ಚನ್ನಾಗಿ ತಿಳಿಹೇಳಿ, ಅವರನ್ನು ಸಮಾಧಾನಗೊಳಿಸಿ, ಅವರ ಸಂಗಾಡ ಮೀನಾಕ್ಷಿಗ ಹಣ ತುಂಬಿದ ಥೈಲಿಯನ್ನು ಕೊಟ್ಟು ಕಳಿಸಿದನು.

ಅವರು ಹೋಗಿ ಮೀನಾಕ್ಷಿಗೆ ಆ ಎಲ್ಲ ಸಂಗತಿಗಳನ್ನೂ ತಿಳುಹಿ, ಆ ಥೈಲಿಯನ್ನು ಅವಳಿಗೆ ಆರ್ಪಿಸಿದರು. ಪತಿಶೋಕದಿಂದ ಮೀನಾಕ್ಷಿಯು ತೀರ ಹತಬಲಳಾಗಿದ್ದಳು. ಅವಳು ಆ ರೂಪಾಯಿಗಳ ಥೈಲಿಯನ್ನು ಸ್ವೀಕರಿಸದೆ ಸಿಟ್ಟಿನ ಭರದಲ್ಲಿ ಅದನ್ನು ದೂರ ಬಿಸಾಡಿ ಒಗೆದಳು!

ಮರುದಿನ ಮುಂಜಾವಿನಲ್ಲಿ ನೆರೆಹೊರೆಯವರು ಬಂದು ನೋಡುತ್ತಾರೆ, ಅಲ್ಲೇನಿದೆ? ಆ ಧನಪತಿಯ ಚಪ್ಪರದ ಬಾಗಿಲು ತೆರದು ನಿಂತಿದೆ. ಅದರಲ್ಲಿ

ಯಾರೂ ಇರಲಿಲ್ಲ. ಮೀನಾಕ್ಷಿಯ ಸುಳಿವು ಎಲ್ಲಿಯೂ ಹತ್ತಲಿಲ್ಲವು! ಒಪ್ಪತ್ತು ಉಂಡು ಉಪವಾಸ ಮಾಡಿ ಅತ್ಯಂತ ಕಷ್ಟಪ್ರಯಾಸದಿಂದ ಕಟ್ಟಿದ ಆ ಚಪ್ಪರವು ಪ್ರಾಣಶೂನ್ಯವಾದ ದೇಹದಂತೆ ನಿರ್ಜೀವವಾಗಿ ತೋರುತ್ತಿತ್ತು! ಧನಪತಿಯ ಆ ಮುಗ್ಗವು, ಮೀನಾಕ್ಷಿಯ ಆ ಸುದರ್ಶನ ರಾಟಿಯು, ಬಹು ಕಷ್ಟದಿಂದ ಸಂಪಾದಿಸಿದ ಹಾಗು ವ್ಯವಸ್ಥಿತವಾಗಿ ಇಡಲ್ಪಟ್ಟ ಸಂಸಾರೋಪಯೋಗಿ ವಸ್ತುಗಳು, ಮಣ್ಣಿನ ಕೊಡ ಮೊದಲಾದ ಭಾಂಡಿಗಳು, ಪಾತ್ರೆಗಳು ಎಲ್ಲವೂ ತಮ್ಮ ತಮ್ಮ ನಿಯಮಿತ ಸ್ಥಳಗಳಲ್ಲಿದ್ದವು; ಆದರೆ ಮುಂದೆ ಸುಖದಿಂದ ಕಾಲಕ್ರಮಣ ಮಾಡಬೇಕೆಂದು ಆ ಚಪ್ಪರವನ್ನು ಕಟ್ಟಿದ ಜೀವನಗಳು ಮಾತ್ರ ಅಲ್ಲಿ ಇರಲಿಲ್ಲ!

ಪ್ರಿಯ ವಾಚಕರೇ ನಡೆಯಿರಿ; ನಾವು ಇನ್ನು ರಾಜಧಾನಿಯಾದ ವಿಜಯನಗರಕ್ಕೆ ತೆರಳೋಣ.

ವಿಜಯನಗರ ಸಾಮ್ರಾಜ್ಯದ ಅಧೀಶ್ವರನಾದ ಮೊದಲನೇ ಬುಕ್ಕರಾಯನು ತನ್ನ ರಾಜಪ್ರಾಸಾದದಲ್ಲಿ ಭವ್ಯವಾದ ದರಬಾರದ ದಿವಾನಖಾನೆಯಲ್ಲಿ ದರಬಾರವನ್ನು ನೆರೆಸಿದ್ದನು. ರಾಜ್ಯದ ಮುಖ್ಯ ಮುಖ್ಯ ಮಂತ್ರಿಗಳು, ಅಧಿಕಾರಿಗಳು, ಶಾಸ್ತ್ರಿ-ಪಂಡಿತರು ಹಾಗೂ ಇತರ ಸರದಾರ-ಸಾವುಕಾರರೂ ಸಭ್ಯ ಜನರೂ ಎರಡೂ ಪಕ್ಕಗಳಲ್ಲಿ ಉಚಿತವಾದ ಸುಖಾಸನಗಳಲ್ಲಿ ವಿರಾಜಮಾನರಾಗಿದ್ದರು. ಮಹಾರಾಜ ಬುಕ್ಕರಾಯನು ಮಧ್ಯಭಾಗದಲ್ಲಿ ಎತ್ತರವಾದ ವೇದಿಕೆಯ ಮೇಲೆ ಸ್ಥಾಪಿಸಿದ ಸುಂದರವಾದ ರಾಜಸಿಂಹಾಸನದ ಮೇಲೆ ಮೆರೆಯುತ್ತಿದ್ದನು. ದರಬಾರದ ಬಾಗಿಲಲ್ಲಿಯೂ, ದರಬಾರದ ಸಭಾಮಂದಿರದಲ್ಲಿಯೂ ಅಲ್ಲಲ್ಲಿಗೆ ಸಶಸ್ತ್ರ ಸೈನಿಕರು ಬಂದೋಬಸ್ತಿಗಾಗಿ ನಿಲ್ಲಿಸಲ್ಪಟ್ಟಿದ್ದರು. ಅದು ಮಹಾರಾಜ ಬುಕ್ಕರಾಯನ ನ್ಯಾಯದಾನದ ಸಭೆಯಾಗಿತ್ತು. ಪ್ರತಿದಿನದಲ್ಲಿಯೂ ಮುಂಜಾವಿನಲ್ಲಿ ಈ ನ್ಯಾಯಸಭೆಯು ಕೂಡುತ್ತಿತ್ತು. ಈ ದರಬಾರದಲ್ಲಿ ಶ್ರೀಮಂತರಿಗೂ-ಬಡವರಿಗೂ, ಸಣ್ಣವರಿಗೂ-ದೊಡ್ಡವರಿಗೂ; ಬ್ರಾಹ್ಮಣರಿಗೂ-ಚಾಂಡಾಲರಿಗೂ, ಅನಾಥರಿಗೂ-ಅಭಾಗಿಗಳಿಗೂ, ಯಾವತ್ತರಿಗೂ ಯಾವ ತರಹದ ಭೇದವೂ ಇಲ್ಲದೆ ನ್ಯಾಯವು ಸಿಗುತ್ತಿದ್ದಿತು. ನಗರವಾಸಿಗಳಾದ ಪ್ರಜೆಗಳೂ, ಆ ರಾಜ್ಯದಲ್ಲಿಯ ಇತರ ಪ್ರಾಂತಗಳ, ಹಳ್ಳಿ-ಪಳ್ಳಿಗಳ ಪ್ರಜೆಗಳೂ ತಮ್ಮ ತಮ್ಮ ಫಿರ್ಯಾದಿಗಳನ್ನು ತೆಗೆದುಕೊಂಡು ನ್ಯಾಯಸಭೆಗೆ ಬರುತ್ತಿದ್ದರು. ರಾಜನು ಅವರವರ ಫಿರ್ಯಾದಿ ತಕರಾರು

ಗಳನ್ನು ಕೇಳಿಕೊಂಡು ಅಧಿಕಾರಿಗಳ-ಶಾಸ್ತ್ರಪಂಡಿತರ ಸಹಾಯದಿಂದ ನ್ಯಾಯದ ತಕ್ಕಡಿಯನ್ನು ಬಹು ಸಮನಾಗಿ ಹಿಡಿದು ಯಾವ ಭಾವನೆಗಳಿಗೂ ಆಸ್ಪದಕೊಡದೆ ನ್ಯಾಯ ನಿಷ್ಠುರದ ಕಾರ್ಯವನ್ನು ಬಹು ಜಾಗರೂಕತೆಯಿಂದ ನೆರವೇರಿಸುತ್ತಿದ್ದನು. ಯೋಗ್ಯ ನ್ಯಾಯ ಕೊಡುವದರಲ್ಲಿ ಬುಕ್ಕಮಹಾರಾಜನು ಬಹು ಪ್ರಸಿದ್ಧನಾಗಿದ್ದನು ಉಚ್ಚ ನೀಚಗಳ ಭೇದವಿರಲಿಲ್ಲ. ವರ್ಣ-ಜಾತಿಗಳ ಕಲ್ಪನೆ ಇರಲಿಲ್ಲ. ಅಧಿಕಾರಿ-ಅನಧಿಕಾರಿಗಳ ತಾರತಮ್ಯವಿರಲಿಲ್ಲ ತನ್ನದು ಪರಕೀಯರದು ಎಂಬ ಪ್ರಭೇದವಿರಲಿಲ್ಲ.

ಮಹಾರಾಜನು ಯಾವುದೋ ಒಂದು ತಕರಾರಿನ ನಿರ್ಣಯವನ್ನು ಮಾಡುತ್ತ ಓಲಗದಲ್ಲಿ ಕುಳಿತಿದ್ದನು. ಅಷ್ಟರಲ್ಲಿಯೇ ಓರ್ವ ತರುಣ ಸ್ತ್ರೀಯಳು ನ್ಯಾಯಮಂದಿರವನ್ನು ಪ್ರವೇಶಿಸಿದಳು. ಅವಳು ಕೂದಲುಗಳನ್ನು ಹಾಗೆಯೇ ಬೆನ್ನಮೇಲೆ ಅಸ್ತವ್ಯಸ್ತವಾಗಿ ಹಾರಿಬಿಟ್ಟಿದ್ದಳು. ಅವಳ ವೇಷವು ಅತ್ಯಂತ ದರಿದ್ರಳದಾಗಿತ್ತು. ಅವಳ ಮುಖವು ಸಂಪೂರ್ಣವಾಗಿ ಬಾಡಿಹೋಗಿತ್ತು. ಅವಳ ಸರ್ವಾಂಗವು ಧೂಲಿಮಯವಾಗಿತ್ತು. ಕಣ್ಣುಗಳು ಒಳನಟ್ಟಿದ್ದವು; ಆದರೂ ಅವುಗಳಲ್ಲಿಯ ತೇಜವು ವಿಲಕ್ಷಣ ಸ್ವರೂಪದ್ದಾಗಿತ್ತು!

ಅವಳ ಆ ಮೂರ್ತಿಯನ್ನೂ ಅವಳ ಆ ಅವತಾರವನ್ನೂ ನೋಡಿ ಅಲ್ಲಿ ಕೂಡಿದ ಎಲ್ಲ ಜನರ ಅಂತಃಕರಣದಲ್ಲಿ ಒಂದು ಪ್ರಕಾರದ ಭೀತಿಯ ಸಂಚಾರವಾಯಿತು! ಆ ತರುಣಿಯು ಒಳಗೆ ನುಗ್ಗಿದವಳೇ ನೆಟ್ಟಗೆ ಮಹಾರಾಜನ ನ್ಯಾಯಸಿಂಹಾಸನದ ಮುಂದೆ ಹೋಗಿ ಮಹಾರಾಜನನ್ನು ಉದ್ದೇಶಿಸಿ ತನ್ನ ದಿವ್ಯವಾದ ಮತ್ತು ತೇಜಸ್ವಿಯಾದ ವಾಣಿಯಿಂದ.—"ಮಹಾರಾಜರೇ, ತಾವು ಈ ದೇಶದ ರಾಜರು. ಪ್ರಜಾಜನದ ಸಂರಕ್ಷಣೆಯ ಮತ್ತು ನ್ಯಾಯದ ಯಾವತ್ತೂ ಭಾರವು ತಮ್ಮ ಮೇಲಿದೆ! ದೀನ-ದರಿದ್ರರ ಪ್ರತಿಪಾಲಕರು ತಾವು! ಶರಣಾಗತರ ಆಶ್ರಯಸ್ಥಾನವು ತಾವೇ! ಇಂಥ ತಮ್ಮಿಂದ ನನಗೆ ನ್ಯಾಯದಾನವು ಸಿಗಲಾರದೇ?" ಎಂದು ಬಿನ್ನಹ ಮಾಡಿದಳು.

ಮಹಾರಾಜನು ಬಹು ನ್ಯಾಯಪ್ರಿಯನು. ನ್ಯಾಯಪಕ್ಷಪಾತಿಯು. ಆತನು ಕೂಡಲೆ ದಯಾರ್ದ್ರಸ್ವರದಿಂದ:"ತಾಯಿ, ನಿನಗೇಕೆ ನ್ಯಾಯವು ಸಿಗಲಾರದು? ನ್ಯಾಯದಾನ ಮಾಡುವದೇ ನನ್ನ ಪರಮ ಪವಿತ್ರವಾದ ಕರ್ತವ್ಯವು. ಅದನ್ನು ನ್ಯಾಯದೇವತೆಯನ್ನು ನಿರಂತರವಾಗಿ ಸ್ಮರಿಸಿ ಯಥಾಶಕ್ತಿಯಾಗಿ ಮಾಡುತ್ತಿರುವೆನು. ಅಮ್ಮಾ, ನೀನು ಯಾರು? ನಿನಗೆ ಯಾವ ನ್ಯಾಯವು

ಬೇಕು? ಬೇಗನೆ ಹೇಳು'' ಎಂದು ನುಡಿದನು.

ಮೀನಾಕ್ಷಿಯು:-''ಮಹಾರಾಜ, ಪ್ರತ್ಯಕ್ಷವಾಗಿ ರಾಜನೇ ಪ್ರಜೆಗಳಸತ್ಯಾನಾಶ ಮಾಡತೊಡಗಿದರೆ, ನ್ಯಾಯ ಕೊಡುವವರಾರು?'' ಎಂದು ಗರ್ಜಿಸಿದಳು.

ಮೀನಾಕ್ಷಿಯ ಈ ನಿರ್ಭಯವಾದ ಮಾತುಗಳನ್ನು ಕೇಳಿ ಆ ದರ್ಬಾರದಲ್ಲಿಯ ಯಾವತ್ತು ಜನರು ಸ್ತಂಭಿತರಾದರು, ಮತ್ತು ಅವಳು ಯಾವಳೋ ಒಬ್ಬ ಹುಚ್ಚು ಹಿಡಿದ ಉನ್ಮಾದಿನಿಯಾಗಿರಬಹುದೆಂದು ತರ್ಕಿಸಿದರು. ಸ್ವತಃ ಮಹಾರಾಜನಿಗೂ ಆದ ಆಶ್ಚರ್ಯಕ್ಕೆ ಎಣೆಯಿರಲಿಲ್ಲ. ಆಗ ಮಹಾರಾಜನು: ''ತಾಯಿ, ನೀನು ಆಡುವ ಮಾತುಗಳ ಅರ್ಥವು ನನಗೆ ಸರಿಯಾಗಿ ಆಗಲೊಲ್ಲದು. ನಾನು ಈ ದೇಶದ ರಾಜನು. ಅಧಿಪತಿಯು. ನಾನು ಎಂದಾದರೂ ನನ್ನ ಯಾವನೊಬ್ಬ ಪ್ರಜೆಯ ಸತ್ಯಾನಾಶ ಮಾಡಿದ್ದು ನನ್ನ ಸ್ಮರಣೆಗೆ ಬರಲೊಲ್ಲದು! ಒಂದುವೇಳೆ ತಿಳಿಯದೆ ನನ್ನಿಂದ ಯಾವದಾದರೊಂದು ಅಪರಾಧವು ಘಟಿಸಿದ್ದರೆ, ಅದು ಯಾವದೆಂಬದನ್ನು ನಿರ್ಭಯದಿಂದಲೂ, ಸ್ಪಷ್ಟವಾಗಿಯೂ ನುಡಿ, ಅಂದರೆ ಈ ಕ್ಷಣದಲ್ಲಿಯೇ ನಾನು ಈ ರಾಜಸಿಂಹಾಸನದಿಂದ ಕೆಳಗೆ ಇಳಿದು ಬರುವೆನು! ನನ್ನ ಪರಿವಾರದ ಜನರಲ್ಲಿ, ಅಧಿಕಾರಿಗಳಲ್ಲಿ ಯಾರಾದರೂ ಯಾವದೇ ಪ್ರಜೆಗೆ ನಿರರ್ಥಕವಾಗಿ ಅನ್ಯಾಯದಿಂದ ಅತ್ಯಾಚಾರ ಮಾಡಿ ಅವನ ಸರ್ವನಾಶ ಮಾಡಿದ್ದ ಪಕ್ಷದಲ್ಲಿ, ಅದರ ಪ್ರತೀಕಾರಾರ್ಥವಾಗಿ ನಾನು ಆ ವಿಷಯದಲ್ಲಿ ಯೋಗ್ಯವಾದ ನ್ಯಾಯವನ್ನು ನಿಸ್ಸಂದೇಹವಾಗಿ ಕೊಡುವೆನು. ನಾನು ಎಲ್ಲಿಯ ವರೆಗೆ ಈ ನ್ಯಾಯಸಿಂಹಾಸನದ ಮೇಲೆ ಅಧಿಷ್ಠಿತನಾಗಿರುವೆನೋ, ಅಲ್ಲಿಯ ವರೆಗೆ ನನ್ನ ರಾಜ್ಯದಲ್ಲಿಯ ಯಾವತ್ತು ಪ್ರಜೆಗಳಿಗೂ ನಾನು ಯೋಗ್ಯವಾದ ನ್ಯಾಯವನ್ನೇ ಕೊಡುವೆನು. ಆಗ ಅಪರಾಧಮಾಡಿದವನು ನನ್ನ ತಮ್ಮನಿರಲಿ, ರಾಜಪುತ್ರನಿರಲಿ ಇಲ್ಲವೆ ಒಬ್ಬ ಅಷ್ಟದರಿದ್ರಿಯಾದ ಮನುಷ್ಯನಿರಲಿ! ಎಲ್ಲರಿಗೂ ಒಂದೇ ತರಹದ ಶಾಸನವು ನನ್ನಿಂದ ವಿಧಿಸಲ್ಪಡುವದೆಂಬದಕ್ಕೆ ನೀನು ತಿಲಾಂಶವಾದರೂ ಸಂದೇಹಪಡಬೇಡ. ತಿಳಿಯಿತೇ!'' ಎಂದು ಆಶ್ವಾಸನವನ್ನು ಕೊಟ್ಟನು.

ಮೀನಾಕ್ಷಿಯ ಮುಖಮಂಡಲವು ಸ್ವಲ್ಪ ವಿಕಸಿತವಾಯಿತು. ಅವಳು ತನ್ನ ಕೈಗಳನ್ನು ಜೋಡಿಸಿಕೊಂಡು ''ಮಹಾರಾಜ! ಸ್ವತಃ ತಮ್ಮ ಚಿರಂಜೀವನಾದ ರಾಜಪುತ್ರ ಕೃಷ್ಣರಾಯನು ನನ್ನ ಮಾಂಗಲ್ಯದ ಆಧಾರನಾದ ಪತಿಯನ್ನು ಖೂನ ಮಾಡಿದನು! ಅದರ ವಿಷಯವಾಗಿ ನನಗೆ ನ್ಯಾಯದಾನವು ಬೇಕಾಗಿದೆ! ಅದನ್ನು ನೀಡುವಿರಾ?'' ಎಂದು ಸ್ಪಷ್ಟವಾಗಿ ಪ್ರಶ್ನೆ ಮಾಡಿದಳು.

ಸರ್ವ ಸಭಾಸದರೂ ಸ್ತಂಭಿತರಾದರು. ಬುಕ್ಕರಾಜನು.''ಏನು? ರಾಜ
ಪುತ್ರ ಕೃಷ್ಣರಾಜನು ಖೂನು ಮಾಡಿರುವನೇ?''

''ಅಹುದು, ಮಹಾರಾಜರೇ! ನಿಷ್ಕಾರಣವಾಗಿ ಕ್ರೋಧಾಂಧನಾದ
ರಾಜಕುಮಾರನು ನನ್ನ ಪತಿಯ ವಧಮಾಡಿರುವನು ಮಹಾರಾಜರೇ, ಏನು
ಹೇಳಲಿ? ನಾವು ತೀರ-ತೀರ ದರಿದ್ರರು ದಿನಕ್ಕೆ ಹೊಟ್ಟೆತುಂಬ ಸಹ ತಿನ್ನಲು
ಉಣ್ಣಲು ಇರಲಿಲ್ಲ. ನಾವು ನಮ್ಮ ಮುರುಕ ಚಪ್ಪರದಲ್ಲಿ ಬಿಸಿಲು-ಮಳೆ
ಗಾಲದಲ್ಲಿ ಕಳವಳಿಸುತ್ತ, ತೊಯಿಸಿಕೊಳ್ಳುತ್ತ ಅಂತೂ ಇಂತೂ ದಿನಗಳನ್ನು
ಕಳೆಯುತ್ತಿದ್ದರೂ ನಮ್ಮಂಥ ಸುಖಿಗಳು ನಾವೇ ಎಂದು ಭಾವಿಸಿದ್ದೆವು.
ನಾವೀರ್ವರೂ ಪತಿ ಪತ್ನಿಗಳು ಭಿನ್ನ ಶರೀರಿಗಳಾಗಿದ್ದರೂ ಪ್ರೇಮಬಂಧನದಿಂದ
ಏಕಜೀವಿಗಳಾಗಿದ್ದೆವು ನಿಜವಾದ ಪ್ರೇಮಕ್ಕೆ ಕೊರತೆಯೇನು? ನಾವೀರ್ವರು
ದಂಪತಿಗಳು ಬಹು ಸುಖ-ಸಮಾಧಾನದಿಂದ ಜೀವಿಸುತ್ತಿದ್ದೆವು. ನಾವು
ಮನಸ್ಸಿನಲ್ಲಿ ಸಹ ಯಾರ ಅಕಲ್ಯಾಣವನ್ನೂ ಚಿಂತಿಸಲಿಲ್ಲ ಅನ್ಯರ ಅಪಾಯ
ವನ್ನು ಬಯಸಲಿಲ್ಲ ಅಂದಮೇಲೆ ಕೃತಿಯಿಂದ ಮಾಡುವದಂತೂ ದೂರೇ
ಉಳಿಯಿತು! ನಾನು ನನ್ನ ಸುದರ್ಶನ ರಾಟಿಯಿಂದ ನೂಲುತ್ತಿದ್ದೆನು. ಹಾಸ
ಹೊಯ್ಯುತ್ತಿದ್ದೆನು. ಪತಿರಾಜನು ವಸ್ತ್ರಗಳನ್ನು ನಯ್ದು ವ್ಯಾಪಾರ ಮಾಡಿ
ಬಂದ ಹಣದಿಂದ ಉಪಜೀವಿಸುತ್ತಿದ್ದವು ಆ ನಮ್ಮ ದೂರದಲ್ಲಿದ್ದ ಹಳ್ಳಿಯ
ಮುರಕ ಚಪ್ಪರದಲ್ಲಿ ನಮ್ಮೀರ್ವರ ಜೀವೈಕ್ಯದಿಂದ, ಮನ-ಮಿಲನದಿಂದ,
ಬಹು ಆನಂದ ವಿನೋದ ವಿಲಾಸದಿಂದ ಸಂಸಾರ ಮಾಡುತ್ತಿದ್ದೆವು ಎರಡು
ತಿಂಗಳುಗಳ ವರೆಗೆ ಒಂದು ಊಟ, ಒಂದು ಉಪವಾಸ ಮಾಡಿ, ಅತಿಶಯ
ದುಃಖಪಟ್ಟು, ಅತ್ಯಂತವಾದ ಕಷ್ಟ ನಷ್ಟಗಳನ್ನು ಸಹಿಸಿ ನಾವೀರ್ವರು ಗಂಡ-
ಹೆಂಡಿರು ನಮ್ಮ ಹೊಸ ಚಪ್ಪರವನ್ನು ಹಾಕಿಕೊಂಡೆವು ನಮ್ಮ ಚಪ್ಪರವು
ಪೂರ್ಣವಾದ ದಿನದಲ್ಲಿಯೇ ಹೊಟ್ಟೆತುಂಬ ಊಟ ಮಾಡಬೇಕೆಂದು ಬಯಸಿ,
ಯಾವತ್ತೂ ತಯಾರಿಯನ್ನು ನಾವು ಮಾಡಿದ ದಿನದಲ್ಲಿಯೇ....ಆ ದಿನವೇ ನನ್ನ
ಪತಿಯು ಎರಡು ತಿಂಗಳುಗಳ ವರೆಗ ಉಪವಾಸ ಮಾಡಿ ದಾರುಣವಾದ ಕಷ್ಟ
ಗಳಿಗೆ ಈಡಾಗಿ ನೊಂದು-ಬೆಂದು, 'ಗೃಹಪೂರ್ಣ' ವಾದ ದಿನದಲ್ಲಿ ಇಚ್ಛೆ
ಯಿಂದ ಪ್ರೀತಿಯ ಪಕ್ವಾನ್ನಗಳನ್ನು ತಯಾರ ಮಾಡಿಸಿ ಅವುಗಳನ್ನು ಉಂಡು
ತೃಪ್ತನಾಗಬೇಕೆಂದು ಬಯಸಿ ಸ್ನಾನಕ್ಕೆ ನದಿಗೆ ಹೋದ ನನ್ನ ಪತಿಯನ್ನು-ನಿರ
ಪರಾಧಿಯಾದವನನ್ನು ತಮ್ಮ ದುಷ್ಟಪುತ್ರನು ಖೂನ ಮಾಡಿರುವನು! ಹಸಿವೆ

ಯಿಂದ ಪತಿಯು ಪಂಚಪ್ರಾಣವು ತಳಮಳ ಪಡುತ್ತಿದ್ದಿತು. ತಯಾರಿಸಿದ ಪತಿಯ ಪ್ರೀತಿಯ ಪಕ್ವಾನ್ನಗಳು ಒಂದು ಕಣವಾದರೂ ಅವನ ಹಸಿದ ಹೊಟ್ಟೆಯಲ್ಲಿ ಹೋಗಿರಲಿಲ್ಲ! ಇಂಥ ಸ್ಥಿತಿಯಲ್ಲಿ ತಮ್ಮ ರಾಜಪುತ್ರನು ಉನ್ಮತ್ತತನದಿಂದ ತನ್ನ ಭಾಲೆಯ ಭಯಂಕರವಾದ ಆಘಾತದಿಂದ ಪತಿಯನ್ನು ಯಮಸದನಕ್ಕೆ ಅಟ್ಟಿರುವನು! ಮಹಾರಾಜರೇ, ಈ ದೀನ ಅನಾಥಳಿಗೆ ನ್ಯಾಯದಾನವನ್ನು ಕೃಪೆ ಮಾಡಿ ನೀಡಬೇಕು. ಇಷ್ಟೇ ನನ್ನ ಕಡೆಯ ಪ್ರಾರ್ಥನೆಯು!'' ಎಂದು ಅಸ್ಖಲಿತವಾಗಿ ನುಡಿದಳು.

ಮಹಾರಾಜ ಬುಕ್ಕರಾಯನು ಅತ್ಯಂತ ಸ್ತಿಮಿತನಾದನು. ಅವನ ಮೋರೆಯು ಕಪ್ಪಿಟ್ಟಿತು. ಕೆಲವು ಕ್ಷಣ ಸುಮ್ಮನಿದ್ದು, ಕಡೆಗೆ ಕಂಪಿತ ಸ್ವರದಿಂದ: ''ಕೃಷ್ಣರಾಯನು ನಿನ್ನ ಪತಿಯನ್ನು ಕೊಂದ ಕಾರಣವಾವುದು?'' ಎಂದು ವಿಚಾರಿಸಿದನು.

ಪ್ರತ್ಯಕ್ಷವಾಗಿ ನೋಡಿದ ನೆರೆಹೊರೆಯವರಿಂದ ಈ ವಿಧ ಘಟನೆಯ ಬಗ್ಗೆ ತಾನು ಕೇಳಿದ ಯಾವತ್ತೂ ಸಂಗತಿಗಳನ್ನು ಮೀನಾಕ್ಷಿಯು ಮರೆ-ಮಾಜದೆ ಮಹಾರಾಜನಿಗೆ ನಿವೇದಿಸಿದಳು.

ಆಗ ಮಹಾರಾಜನು ಶಾಂತಸ್ವರದಿಂದ ''ತಾಯೀ, ಯಾವದಾದರೂ ಅಪರಾಧದ ನ್ಯಾಯ-ವಿಚಾರಣೆಯನ್ನು ಅತ್ಯಂತ ಶಾಂತತೆಯಿಂದಲೇ ಮಾಡಬೇಕಾಗುತ್ತದೆ. ಎರಡೂ ಪಕ್ಷಗಳ ಅಭಿಪ್ರಾಯಗಳನ್ನು ತೆಗೆದುಕೊಳ್ಳಬೇಕಾಗುತ್ತದೆ. ಅವಶ್ಯವಿದ್ದ ಪುರಾವೆಗಳನ್ನು ಪರಾಮರ್ಶಿಸಬೇಕಾಗುತ್ತದೆ. ಯಾರ ಮೇಲೆ ಅಪರಾಧದ ಆರೋಪವಿರುತ್ತದೆಯೋ, ಅವನಿಗೂ ಸಹ ಯಾವ ರೀತಿಯಿಂದಲೂ ಅನ್ಯಾಯವಾಗದಂತೆ ಎಚ್ಚರಪಡಬೇಕಾಗುತ್ತದೆ. ರಾಜಪುತ್ರನು ನಿನ್ನ ಪತಿಯನ್ನು ಈ ಪರಿಸ್ಥಿತಿಯಲ್ಲಿ ಹತ್ಯಮಾಡಿದನೆಂಬ ಬಗ್ಗೆ ನಿನ್ನಲ್ಲಿ ಏನಾದರೂ ಪುರಾವೆಯು ಇರುತ್ತದೆಯೋ?'' ಎಂದು ವಿಚಾರಿಸಿದನು.

ಮೀನಾಕ್ಷಿಯು ಆವೇಶದಿಂದ ''ಪುರಾವೆಯೇ! ಮಹಾರಾಜರೇ, ಇದಕ್ಕೂ ಹೆಚ್ಚಿನ ಪುರಾವೆಯು ಇನ್ನೇನು ಬೇಕು? ನೋಡಿರಿ, ತಾವು ದಯಮಾಡಿ ನನ್ನ ಕಡೆಗೆ ನೋಡಿರಿ. ನಾನು ಹೇಗೆ ಇದ್ದೆನು, ಈಗ ನನ್ನ ಸ್ಥಿತಿಯು ಏನಾಗಿದೆ? ಪರಿಶೀಲಿಸಿ ನೋಡಿರಿ! ಮಹಾರಾಜರೆ, ಯಃಕಶ್ಚಿತಳಾದ ನಾನು ಕೃಷ್ಣರಾಯನಂಥ ಘನವಂತನಾದ ಮತ್ತು ವೈಭವಶಾಲಿಯಾದ ಪುರುಷನ ಮೇಲೆ ಸುಳ್ಳು ಆರೋಪವನ್ನು ಹೊರಿಸಿ, ತಮ್ಮ ಈ ನ್ಯಾಯಾಸನದ ಮುಂದೆ ನ್ಯಾಯಭಿಕ್ಷೆಯನ್ನು

ಬೇಡಲು ಬರುವದು ಶಕ್ಯವೆ? ಪ್ರತ್ಯಕ್ಷವಾದ ಪುರಾವೆಗಳು ಬೇಕಾದ ಪಕ್ಷದಲ್ಲಿ ತಮ್ಮ ಜನರನ್ನು ಕೊಟ್ಟುಕಳಿಸಿ ನಮ್ಮ ದೇವಾಲಯದಿಂದ ಕಣ್ಣುಮುಟ್ಟ ನೋಡಿದ ಸಾಕ್ಷಿದಾರರನ್ನು ಕರೆಸಿ ವಿಚಾರ ಮಾಡಬೇಕು.''

ಬುಕ್ಕರಾಯನು ಕೆಲವು ವೇಳೆ ಸುಮ್ಮನಿದ್ದು ನಂತರ ದರಬಾರದ ಅಧಿಕಾರಿಗಳ ಕಡೆಗೆ ತಿರುಗಿ ರಾಜಪುತ್ರನಾದ ಕೃಷ್ಣರಾಯನನ್ನು ಒಳಗಕ್ಕೆ ಕರೆದು ಕೊಂಡು ಬರುವ ಬಗ್ಗೆ ಆಜ್ಞೆಯನ್ನಿತ್ತನು.

ಕೃಷ್ಣರಾಯನು ದರಬಾರವನ್ನು ಪ್ರವೇಶಿಸಿದನು. ಮಹಾರಾಜ ಬುಕ್ಕರಾಯನು ಮೀನಾಕ್ಷಿಯ ಫಿರ್ಯಾದಿಯ ಸ್ವರೂಪವನ್ನು ಸ್ವಲ್ಪದರಲ್ಲಿಯೇ ಅವನಿಗೆ ತಿಳಿ ಹೇಳಿ. "ಕೃಷ್ಣರಾಯಾ, ನೀನು ಈ ತರುಣ ಸ್ತ್ರೀಯ ಪತಿಯ ಹತ್ಯವನ್ನು ಮಾಡಿರುವಿಯಾ?'' ಎಂದು ವಿಚಾರಿಸಿದನು.

ಕೃಷ್ಣರಾಯನು ಈ ಪ್ರಶ್ನವನ್ನು ಕೇಳಿ. 'ನಾನು ಸುಳ್ಳು ನುಡಿಯುವ ಪಾಪಕೃತ್ಯವನ್ನು ಮಾಡಲಾರೆನು. ನೀವು ಕೇಳಿದ ಯಾವತ್ತು ಸಂಗತಿಗಳು ನಿಜವಾದವುಗಳು, ಆದರೆ ನಾನು ಕೊಂದ ಮನುಷ್ಯನು ಈ ತರುಣಿಯ ಪತಿಯು ಅಹುದೋ-ಅಲ್ಲವೋ ಎಂಬ ಸಂಗತಿಯನ್ನು ಮಾತ್ರ ಅರಿಯೆನು'' ಎಂದು ಉತ್ತರ ಕೊಟ್ಟನು.

ಕೃಷ್ಣರಾಯನ ಕಡೆಗೆ ತೀವ್ರ ದೃಷ್ಟಿಯಿಂದ ನೋಡುತ್ತ ಬುಕ್ಕ ಮಹಾರಾಜನು ಗಂಭೀರ ಸ್ವರದಿಂದ "ಕೃಷ್ಣರಾಯಾ, ನೀನು ರಾಜಪುತ್ರನಾಗಿದ್ದರೂ, ಈಗ ನೀನು ನನ್ನ ಒಬ್ಬ ಪ್ರಜೆಯೆಂದು ಈ ನ್ಯಾಯ ಸಿಂಹಾಸನದ ಎದುರಿಗೆ ನಿಂತಿರುವಿ. ಯಾರಾದರೂ ಯಾರನ್ನಾದರೂ ಕೊಂದರೆ ಅವನಿಗೆ ಯಾವ ಶಾಸನವಾಗುತ್ತದೆಂಬದು ನಿನಗೆ ಗೊತ್ತುಂಟಷ್ಟೇ?'' ಎಂದು ಕೇಳಿದನು

ಕೃಷ್ಣರಾಯನು "ಮಹಾರಾಜರೇ, ಪ್ರಾಣವಧಕ್ಕೆ ಪ್ರಾಣದಂಡದ ಶಿಕ್ಷೆಯೆಂಬದನ್ನು ಅರಿತಿರುವೆನು. ಆದರೆ ನಾನು ರಾಜ್ಯಾಧಿಪತಿಯಾಗಿರದಿದ್ದರೂ ರಾಜಕುಮಾರನಾಗಿರುವೆನು ಭಯಂಕರವಾದ ಸಿಟ್ಟಿನ ಲಹರಿಯಲ್ಲಿ ನಾನು ತಮ್ಮ ಒಬ್ಬ ಪ್ರಜೆಯ ಪ್ರಾಣಹರಣ ಮಾಡಿ ಘೋರವಾದ ಅನ್ಯಾಯವನ್ನು ಮಾಡಿದ್ದಕ್ಕೆ ಒಪ್ಪುತ್ತೇನೆ ಆ ಪಾಪಕಾರ್ಯಕ್ಕಾಗಿ ನನಗೆ ಈಗ ಅತಿಶಯವಾಗಿ ಪಶ್ಚಾತ್ತಾಪವೂ ಆಗಿದೆ. ಈ ದೀನ ರಮಣಿಗೆ ದಾರಿದ್ರ್ಯದ ತಾಪವಾಗದಂತೆಯೂ, ಅನಾಥತ್ವದ ಮೂಲಕವಾಗಿ ದುಃಖವಾಗದಂತೆಯೂ ನಾನು ವ್ಯವಸ್ಥೆ ಮಾಡಿ ಕೊಡುವೆನು.'' ಎಂದು ಬೇಡಿಕೊಂಡನು.

ಕೃಷ್ಣರಾಯನ ಈ ಶಬ್ದಗಳನ್ನು ಕೇಳಿ ಮೀನಾಕ್ಷಿಯ ಕಣ್ಣುಗಳಿಂದ ಬೆಂಕಿಯ ಕಿಡಿಗಳು ಹೊರಚಿಮ್ಮಹತ್ತಿದವು. ಅವಳು ಸಂತಾಪಾತಿಶಯದಿಂದ: "ಪಾಪಿ, ಅಧಮಾ, ಯಾವ ಸ್ತ್ರೀಯಳನ್ನು ನಿನ್ನ ಸ್ವಹಸ್ತದಿಂದ ವೈಧವ್ಯದ ಬೆಂಕಿಯಲ್ಲಿ ದೂಡಿದೆಯೋ, ಅವಳ ಆ ಹೃದಯ ದುಃಖವನ್ನು ದೂರಮಾಡುವ ಆ ನಿನ್ನ ಸಂಪತ್ತಾವದು? ನೀಚಾ! ದುಷ್ಟಾ! ಕುಲಾಂಗಾರಾ! ಪರದುಃಖ ಶೀತಲ! ಇಹಲೋಕದಲ್ಲಿಯ ನನ್ನ ಸುಖ ಸರ್ವಸ್ವವನ್ನೂ ನೀನೇ ಸ್ವಹಸ್ತದಿಂದ ಸುಟ್ಟು ಸೂರೆಮಾಡಿರುವೆ! ನಿನಗೆ ಧಿಃಕಾರವಿರಲಿ! ಸಹಸ್ರಶಃ ಧಿಃಕಾರವಿರಲಿ!!" ಎಂದು ಕೃಷ್ಣರಾಯನನ್ನು ಧಿಃಕರಿಸಿ ಮಾತಾಡಿದಳು.

ಕೃಷ್ಣರಾಯನು ಸಂತಾಪದಿಂದ [illegible]. "ನಿನ್ನ ಹೃದಯವೇ! ಒಡವರಿಗೆಲ್ಲಾದರೂ ಹೃದಯವಿರುತ್ತದೆಯೋ? ಈ ಸಂಗತಿಯನ್ನು ನಾನು ಇಂದೇ ಮೊದಲು ಕೇಳುತ್ತೇನೆ! —" ಎಂದು ಉದ್ಗಾರಗಳನ್ನು ತೆಗೆದನು.

ಆಗ ಬುಕ್ಕ ಮಹಾರಾಜನು ಗಟ್ಟಿಯಾಗಿ. "ಮೂರ್ಖಾ, ಬಾಯಿ ಮುಚ್ಚು. ಕೃಷ್ಣರಾಯಾ ನೀನು ಈಗ ಏನು ಹರಟುತ್ತಿರುವೆ, ಎಚ್ಚರಿಕೆಯಿರುವದೇ? ನೀನು ರಾಜಪುತ್ರನಾದರೂ ರಾಜನಲ್ಲವು! ಪ್ರತ್ಯಕ್ಷ ರಾಜನಿಗೂ ಸಹ ಇಂಥ ಘೋರ ಅಪರಾಧಕ್ಕಾಗಿ ಕ್ಷಮೆ ಹೊಂದುವ ಅಧಿಕಾರವು ಇರುತ್ತದೆಯೋ ಇಲ್ಲವೋ ಸಂಶಯಾಸ್ಪದವ! ಇಂದು ಈ ನ್ಯಾಯ ಸಿಂಹಾಸನದ ಮುಂದೆ ನಿನಗೂ ಬೇರೆ ಸಾಮಾನ್ಯಪ್ರಜೆಗೂ ತಿಲಮಾತ್ರವಾದರೂ ಅಭ್ಯಂತರವಿಲ್ಲವು. ಸಾಮಾನ್ಯ ಮನುಷ್ಯನಿಗೆ ಇಂಥ ಅಪರಾಧಕ್ಕಾಗಿ ಯಾವ ಶಿಕ್ಷೆಯು ವಿಧಿಸಲ್ಪಡುತ್ತಿದ್ದಿತೋ ಅದೇ ಶಿಕ್ಷೆಯನ್ನು ನಿನಗೆ ವಿಧಿಸಲು ರಾಜಧರ್ಮದಿಂದ ನಾನು ಬದ್ಧನಾಗಿರುವೆನು ಕಾರಣ ನೀನು ಮಾಡಿದ ನರವಧಕ್ಕಾಗಿ ನಿನಗೆ ನಾನು ಪ್ರಾಣದಂಡದ ಶಿಕ್ಷೆಯನ್ನು ವಿಧಿಸುತ್ತೇನೆ! ಪಹರೇಯುವರೇ, ಕೃಷ್ಣರಾಯನನ್ನು ಕೂಡಲೆ ಕಾರಾಗೃಹಕ್ಕೆ ದಬ್ಬಿರಿ" ಎಂದು ಆಜ್ಞಾಪಿಸಿದನು.



(೫)

ಮಹಾರಾಜ ಬುಕ್ಕರಾಯನು ಸ್ವಂತ ಮಗನಿಗೆ ವಿಧಿಸಿದ ಈ ಪ್ರಾಣದಂಡದ ಶಿಕ್ಷೆಯನ್ನು ಕೇಳಿ, ಸಭಿಕರು ಚಿಪ್ಪಾಗಿ ಚಿತ್ರಗಳಂತೆ ಅಚಲರಾಗಿ ಕುಳಿತರು! ಕೃಷ್ಣರಾಯನು ತಲೆ ತಗ್ಗಿಸಿಕೊಂಡು ನಿಂತುಕೊಂಡನು.

ಕೆಲವು ಕ್ಷಣಗಳು ಕ್ರಮಿಸಿಹೋದ ಮೇಲೆ ಮುಖ್ಯ ಮಂತ್ರಿಯು, ಅಮಾತ್ಯರು ಮುಂತಾದವರು ರಾಜಪುತ್ರನಿಗೆ ಪ್ರಾಣದಾನ ಮಾಡಬೇಕೆಂದು ಬುಕ್ಕರಾಯನನ್ನು ಪ್ರಾರ್ಥಿಸಿದರು, ಆದರೆ ವ್ಯರ್ಥವು!

ಅವರ ಯತ್ನವು ಸಫಲವಾಗಲಿಲ್ಲ ನಂತರದಲ್ಲಿ ಇತರ ಅಧಿಕಾರಿಗಳು ಶಾಸ್ತ್ರಿಗಳು, ಪಂಡಿತರು ಮಹಾರಾಜನ ಹತ್ತಿರ ರಾಜಕುಮಾರನ ಪ್ರಾಣಭಿಕ್ಷೆಯನ್ನು ದಯಮಾಡಿ ನೀಡಬೇಕೆಂದು ಯಾಚಿಸಿದರು. ರಾಜಕುಮಾರ ಮತ್ತು ಇತರ ಸಾಮಾನ್ಯ ಪ್ರಜೆಗಳು ಇವರ ನಡುವೆ ತಾರತಮ್ಯವನ್ನು ರಚಿಸಿದರು. ಅವರವರ ಪ್ರಥಕ್ ಹಕ್ಕಿನ ಸಂಬಂಧವಿಂದ ಚರ್ಚೆಯನ್ನು ಮಾಡಿದರು; ಆದರೆ ಧರ್ಮನಿಷ್ಠನಾದ ಹಾಗೂ ನ್ಯಾಯ ನಿಷ್ಠುರನಾದ ಬುಕ್ಕ ಮಹಾರಾಜನ ಮುಂದೆ ಯಾರ ಆಟವೂ ನಡೆಯಲಿಲ್ಲ. ಸತ್ಯಪ್ರತಿಜ್ಞನಾದ ಮಹಾರಾಜ ಬುಕ್ಕರಾಯನು ತನ್ನ ಆಜ್ಞೆಯನ್ನು ಹಿಂದಕ್ಕೆ ತೆಗೆದುಕೊಳ್ಳಲಿಲ್ಲ.

ಅತ್ಯಲ್ಪ ಕಾಲದಲ್ಲಿಯೇ ರಾಜಕುಮಾರನಿಗೆ ವಿಧಿಸಿದ ಪ್ರಾಣದಂಡದ ಶಿಕ್ಷೆಯ ಸುದ್ದಿಯು ಹಾ ಹಾ! ಅನ್ನುವಷ್ಟರಲ್ಲಿ- ಅಂತಃಪುರಕ್ಕೆ ಹೋಗಿ ಮುಟ್ಟಿತು ಮಹಾರಾಜ್ಞಿಯವರು ಆ ಕಾಲಕ್ಕೆ ವಿದ್ಯಾರಣ್ಯಸ್ವಾಮಿಗಳ ಸಂಗಡ ತಮ್ಮ ಯಾವತ್ತೂ ಪರಿವಾರ ಸಹಿತವಾಗಿ ಕಾಶೀಯಾತ್ರೆಗೆ ಪ್ರಯಾಣ ಬೆಳೆಸಿದ್ದರು. ಕೃಷ್ಣರಾಯನ ಪತ್ನಿಯು ಇತರ ರಾಜಸ್ತ್ರೀಯರ ಸಮೇತಳಾಗಿ ಅಂತಃಪುರದಲ್ಲಿ ಇದ್ದಳು. ಅವಳಿಗೆ ಈ ಭಯಂಕರವಾದ ವಾರ್ತೆಯು ಹತ್ತಿದ ಕೂಡಲೆ ಆಕ್ರಾಂತ ಮಾಡತೊಡಗಿದಳು.

ಮಹಾರಾಜರ ಸೊಸೆಯು ಆ ಆಕ್ರಾಂತವು ಕೇಳಹತ್ತಲು, ಮೀನಾಕ್ಷಿಯು ನೋಡಿನ ಹವ್ಯಾಸವು ಎತ್ತೋ ಅಡಗಿ ಹೋಯಿತು. ಅವಳ ಕ್ರೋಧಸಂತಪ್ತವಾದ ಮುಖಮಂಡಲವು ತೀರ ಕನಿಕರಭಾವವನ್ನು ಧರಿಸಿತು. ಕೂಡಲೆ ಅವಳು ಮಹಾರಾಜರನ್ನು ಕುರಿತು —"ಮಹಾರಾಜರೇ, ನಾನೂ ಓರ್ವ ಸ್ತ್ರೀಯಳು. ವೈಧವ್ಯದ ಭಯಂಕರವಾದ ಅಗ್ನಿಕುಂಡವು ಹೇಗೆ ದಹಿಸುತ್ತಿ

ರುವದೆಂಬನ್ನು ನಾನು ಈಗ ಪ್ರತ್ಯಕ್ಷವಾಗಿ ನೋಡುತ್ತಿರುತ್ತೇನೆ. ಆ ಅಗ್ನಿ ಕುಂಡದಲ್ಲಿ, ಆ ದಾರುಣವಾದ ದುಃಖಯಾತನೆಯಲ್ಲಿ ನನ್ನಂಥ ಎರಡನೇ ಯಾವ ಸ್ತ್ರೀಯುಳನ್ನೂ ನಾನು ನೂಕಗೊಡಲಾರೆನು! ರಾಜಪುತ್ರನ ಮೇಲಿನ ನನ್ನ ಫಿರ್ಯಾದಿಯನ್ನು ನಾನು ಈಗ ಹಿಂದಕ್ಕೆ ತೆಗೆದುಕೊಳ್ಳುತ್ತೇನೆ. ದಯುಮಾಡಿ ನನಗೆ ಹಾಗೆ ಮಾಡಲಿಕ್ಕೆ ಅಪ್ಪಣೆ ಕೊಡಬೇಕು ಮಹಾರಾಜರೇ, ತಮ್ಮ ಮಗನ ಆ ಮಹದಪರಾಧಕ್ಕಾಗಿ ಅವನನ್ನು ದಯಮಾಡಿ ಕ್ಷಮಿಸಿರಿ. ಅವನ ಆ ಪತ್ನಿಯು ಸುಹಾಸಿನಿಯು, ಆ ತಮ್ಮ ರಾಜಸ್ನುಷೆಯು, ನನ್ನ ಸ್ತ್ರೀ ಜಾತಿಯ ಭಗಿನಿಯು ತನ್ನ ಪತಿಯ ಚಿರ ಸಹವಾಸದ ಸುಖವನ್ನು ಅನುಭವಿಸಲಿ! ಇಗೊ ನಾನು ಹೊರಟೆನು. ನನ್ನ ಮೊರೆಯನ್ನು ದಯವಿಟ್ಟು ಕೇಳಿರಿ ಹೊರ ಟೆನು,'' ಎಂದು ಗಂಭೀರ ವಚನಗಳನ್ನು ನುಡಿದನು

ಮೀನಾಕ್ಷಿಯ ಈ ಅಪೂರ್ವವಾದ ಉದಾತ್ತ ಭಾಷಣವನ್ನು ಕೇಳಿ ಯಾವತ್ತೂ ಸಭಾಸದರು ಅವಳ ವಿಷಯವಾಗಿ ''ಧನ್ಯ! ಧನ್ಯ!!'' ಎಂಬ ಉದ್ಗಾರಗಳನ್ನು ಹೊರಪಡಿಸಿದರು ಸಭೆಯಲ್ಲಿ ಸ್ವಲ್ಪ ಶಾಂತತೆಯು ನೆಲೆ ಗೊಂಡನಂತರ ಮಹಾರಾಜರು ಮೀನಾಕ್ಷಿಯನ್ನು ಉದ್ದೇಶಿಸಿ -''ತಾಯಿ, ನೀನು ಮಹಾಮಹಿಮಳು, ಪ್ರತ್ಯಕ್ಷ ದೇವಿಯು! ಈ ನಿನ್ನ ಬೇಡಿಕೆಯು ನಿನ್ನ ಉದಾರವಾದ ಅಂತಃಕರಣಕ್ಕೆ ಶೋಭಿಸತಕ್ಕದ್ದೇ ಆಗಿದೆ ಅದಕ್ಕಾಗಿ ಅಂತಃಕರಣ ಪೂರ್ವಕವಾಗಿ ನಾನು ನಿನಗೆ ನನ್ನ ಧನ್ಯವಾದಗಳನ್ನು ಸಮರ್ಪಿಸುತ್ತೇನೆ; ಆದರೆ ತಾಯಿ, ನಾನು ರಾಜನು. ಕಾರಣ ನಾನು ರಾಜಧರ್ಮವನ್ನು, ಅದು ಎಷ್ಟೇ ನಿಷ್ಠುರವಾದದ್ದಿರಲಿ ಪಾಲಿಸಲೇ ಬೇಕು ಕೃಷ್ಣರಾಯನು ನನ್ನ ಓವ ಪ್ರಜೆಯ ವಧ ಮಾಡಿರುವನು ಆ ಸಂಗತಿಯು ನನ್ನ ದೃಷ್ಟಿಗೆ ಬಂದಿದೆ. ನಿನ್ನ ಪತಿಯನ್ನು ನಿಷ್ಕಾರಣವಾಗಿ ಬಹು ಕ್ರೂರತನದಿಂದ ವಧ ಮಾಡಿದ ನರಾ ಧಮನಿಗೆ ನೀನು ಕ್ಷಮೆ ಮಾಡಿ ನಿನ್ನ ಹೃದಯದ ಉದಾತ್ತತೆಯನ್ನು ಜಗತ್ತಿಗೆ ಹರಡಿರುವಿ! ಆದರೆ ಈ ಸಿಂಹಾಸನದ ರಾಜಧರ್ಮವು ಇಂಥ ಮಹದಪರಾಧ ವನ್ನು ಕ್ಷಮಿಸಲಾರದು! ನರಹತ್ಯೆಗೆ ತಕ್ಕ ಶಿಕ್ಷೆಯು ಪ್ರಾಣದಂಡವೇ! ಜೀವನ ಪ್ರತಿಫಲಕ್ಕಾಗಿ ರಾಜಧರ್ಮವು ಜೀವವನ್ನೇ ಬೇಡುತ್ತದೆ! ಯಾರು ಎಷ್ಟೇ ಆಗ್ರಹ ಮಾಡಲಿ, ಎಷ್ಟೇ ರೀತಿಯಿಂದ ಹೇಳಿಕೊಳ್ಳಲಿ, ಪ್ರಾರ್ಥಿಸಲಿ ಇಲ್ಲವೆ ಶಾಪಿಸಲಿ; ರಾಜಧರ್ಮವು ತನ್ನ ನಿಯಮವನ್ನು ಉಲ್ಲಂಘಿಸಲಾರದು!'' ಎಂದು ನ್ಯಾಯನಿಷ್ಠುರವಾದ ವಾಣಿಯನ್ನು ನುಡಿದನು.

ಮೀನಾಕ್ಷಿಯು ನಯನಗಳೊಳಗಿಂದ ಪುನಃ ಅಗ್ನಿಸ್ಫುಲ್ಲಿಂಗವಾಗತೊಡಗಿತು. ಕ್ಷಣಹೊತ್ತು ಸುಮ್ಮನೆ ನಿಂತು ಮೀನಾಕ್ಷಿಯು ನ್ಯಾಯ ಸಿಂಹಾಸನಸ್ಥನನ್ನು ಕುರಿತು –"ರಾಜಧರ್ಮವು ಪ್ರಾಣಕ್ಕೆ ಪ್ರಾಣವನ್ನು ಬೇಡುತ್ತದೆಯೋ? ಒಳ್ಳೇದು ಮಹಾರಾಜರೇ, ನಿತಾಂತ ನ್ಯಾಯಮೂರ್ತಿಗಳೇ, ಪ್ರಾಣದ ಬದಲಾಗಿ ತಮಗೆ ಪ್ರಾಣವೇ ಬೇಕಾಗಿದ್ದ ಪಕ್ಷದಲ್ಲಿ ಈ ನನ್ನ ತುಚ್ಛವಾದ ಪ್ರಾಣವನ್ನು ತೆಗೆದುಕೊಂಡು, ತಮ್ಮ ಸೋಸೆಯ ಜೀವನಸರ್ವಸ್ವವಾದ ಕೃಷ್ಣರಾಯನ ಪ್ರಾಣವನ್ನು ಅವಳಿಗೆ ದಾನಮಾಡಬೇಕು. ಹೀಗಾಯಿತೆಂದರೆ ತಮ್ಮ ರಾಜಧರ್ಮವು ನಿಷ್ಕಲಂಕವಾಗುವದು. ತಮ್ಮ ರಾಜಸ್ನುಷೆಯೂ ಚಿರಕಾಲ ಸುಖ-ಸೌಭಾಗ್ಯದಲ್ಲಿ ರಮಿಸುವಳು, ಹಾಗೂ ಈ ನನ್ನ ಅಸಹ್ಯವಾದ ದುಃಖಮಯವಾದ ಜೀವನದ ಅಂತವೂ ಆಗುವದು!" ಎಂದು ಅನುಪಮೇಯವಾದ ನುಡಿಗಳನ್ನು ನುಡಿದಳು.

ಹೀಗೆ ನುಡಿದು ಮೀನಾಕ್ಷಿಯು ಸ್ವಲ್ಪ ತಡೆದಳು, ಹಾಗು ಅವಳು ತನ್ನ ಸೆರಗಿನೊಳಗೆ ಟೊಂಕದ ಹತ್ತಿರ ಕೈ ಹಾಕಿ "ಮಹಾರಾಜರೇ, ತಮ್ಮಿಂದ ಇಂದು ನನಗೆ ಉಚಿತವಾದ ನ್ಯಾಯವು ಸಿಗದಿದ್ದರೆ, ತಮ್ಮ ಎದೆಯಲ್ಲಿ ಈ ಕಠಾರಿಯನ್ನು ಚುಚ್ಚಿ ನನ್ನ ಪತಿಯ ಮರಣದ ಸೇಡನ್ನು ಚನ್ನಾಗಿ ತೀರಿಸುತ್ತಿದ್ದೆನು! ಆದರೆ ಈಗ ಹಾಗೆ ಮಾಡುವ ಕಾರಣವು ಉಳಿಯಲಿಲ್ಲ. ಯೋಗ್ಯವಾದ ನ್ಯಾಯದಾನವನ್ನು ನೀಡಿ, ತಾವು ನಿಜವಾದ ರಾಜಧರ್ಮವನ್ನು ಪಾಲಿಸಿದಿರಿ; ಆದರೂ ಈಗ ಅದೇ ಸಾಧನದಿಂದಲೇ ಈ ಮುಂದೆಯೂ ತಮ್ಮ ಕೀರ್ತಿಯುಕ್ತವಾದ ರಾಜಧರ್ಮವನ್ನು ನಾನು ನಿಷ್ಕಲಂಕವನ್ನಾಗಿ ಮಾಡುತ್ತೇನೆ. ರಾಜಧರ್ಮದಲ್ಲಿ ಪ್ರಾಣಕ್ಕೆ ಪ್ರಾಣವೇ ಬೇಕಾಗಿದ್ದ ಪಕ್ಷಕ್ಕೆ ಇದೇ ಈಗ ಸ್ವೀಕರಿಸಿರಿ, ಈ ಪ್ರಾಣವನ್ನು ಅರ್ಪಿಸುತ್ತೇನೆ. ಇದರ ಪ್ರತಿಫಲಕ್ಕಾಗಿ ತಾವು ರಾಜಕುಮಾರನಿಗೆ ಪ್ರಾಣದಾನವನ್ನು ನೀಡಬೇಕು. ಇದೇ ತಮ್ಮ ಚರಣಾರವಿಂದದಲ್ಲಿ ನನ್ನ ಅಂತಿಮ ಪ್ರಾರ್ಥನೆಯು!"

ಹೀಗೆ ಮಾತುಗಳನ್ನು ಆಡುತ್ತ-ಆಡುತ್ತ ಮೀನಾಕ್ಷಿಯು ತನ್ನ ಸೆರಗಿನೊಳಗಿಂದ ಒಂದು ಸೂಕ್ಷ್ಮಧಾರೆಯ ಚೂರಿಯನ್ನು ಹೊರಗೆ ತೆಗೆದಳು. ಮಹಾರಾಜರಿಗೆ ಮೀನಾಕ್ಷಿಯ ಮುಂದಿನ ಸ್ಥಿತಿಯ ಕಲ್ಪನೆಯು ಒಂದು ಅವರು ಕೆಳಗೆ ಬರಬೇಕೆಂದು ಸಿಂಹಾಸನದಿಂದ ಮೇಲಕ್ಕೇಳುವ ಕ್ಷಣದಲ್ಲಿಯೇ ಮೀನಾಕ್ಷಿಯು ಆ ಹದನವಾದ ಚೂರಿಯನ್ನು ಬುಡಮಟವಾಗಿ ತನ್ನ ಹೃದಯ ಕಮಲ

ದಲ್ಲಿ ಚುಚ್ಚಿಕೊಂಡಳು! ಅವಳ ದುಃಖದ ಅಂತವಾಯಿತು! ಬೇಗನೆ ವಿಧವೆ ಯಾಗತಕ್ಕ ಒಬ್ಬ ಭಗಿನಿಗೆ ಅವಳ ಪತಿಯ **ಪ್ರಾಣದಾನ** ಮಾಡಿ ಮೀನಾಕ್ಷಿಯು ಪರಲೋಕದಲ್ಲಿದ್ದ ತನ್ನ ಜೀವಿತೇಶ್ವರನಲ್ಲಿ ನಿರಂತರವಾಗಿ ಮಿಲನ ವಾಗಬೇಕೆಂದು ದಿವ್ಯ ಧಾಮಕ್ಕೆ ಹೊರಟು ಹೋದಳು!

ಆಗ ಬುಕ್ಕ ಮಹಾರಾಜನು. "ಕೃಷ್ಣರಾಯಾ, ನೋಡಿದಿಯಾ ಬಡವರ ಅಪ್ರತಿಮ ದಾನವನ್ನು! ಸಭಿಕರೇ, ನೋಡಿದಿರಾ ಈ ಮಹಾಮಹಿಮಳ ಸತ್ಕೃತಿಯನ್ನು!" ಎಂದು ಬಹು ಗಾಂಭೀರತೆಯಿಂದ ನುಡಿದನು. ಆ ಸಭೆಯಲ್ಲಿರುವರೆಲ್ಲರೂ ಆ ಮಂಗಲಮಹಿಮಳ ಯೋಗ್ಯತೆಯನ್ನು ಹಾಡಿ ಹರಸಿದರು! ಧನ್ಯಳು! ಧನ್ಯಳು! ನಿಜವಾಗಿಯೂ ಆ ಬಡ ಮೀನಾಕ್ಷಿಯು ಧನ್ಯಳು!!!

ಬುಕ್ಕಮಹಾರಾಜನು ಮೀನಾಕ್ಷಿಯ ಅಂತಿಮಪ್ರಾರ್ಥನೆಯನ್ನು ಅಮಾನ್ಯವಾಗ ಮಾಡಲಿಲ್ಲ. ಕೃಷ್ಣರಾಯನನ್ನು ಆನೆಯ ಕಾಲಿಗೆ ಹಾಕಿ ತುಳಿಸಲಿಲ್ಲ. ಒಂದು ಸೀಮಾಂತರದಲ್ಲಿಯ ಕಿಲ್ಲೆಯಲ್ಲಿ ರಾಜಪುತ್ರನಾದ ಕೃಷ್ಣರಾಯನನ್ನು ಸಪತ್ನೀಕನಾಗಿ ಆಜನ್ಮಪರ್ಯಂತವಾಗಿ ಇಡಲಿಕ್ಕೆ ಆಜ್ಞಾಪಿಸಿದನು




ಇದು ಅನಂದವನ-ಅಗಡಿಯ ಶ್ರೀ ಶೇಷಾಚಲ ಪ್ರಿಂಟಿಂಗ ಪ್ರೆಸ್ಸಿನಲ್ಲಿ
ಭ. ಶ. ಕಾಳೆ ಇವರಿಂದ ಮುದ್ರಿಸಲ್ಪಟ್ಟಿತು.

# ಹೊಸ ಪುಸ್ತಕಗಳು.

## ವಿಮಲಾ, ಬೆಲೆ ೧ ರೂ

ಅಥವಾ ಮತ್ಸರಗ್ರಸ್ತ ಭಗಿನಿ.

ಪೃಥ್ವೀರಾಜನ ಕಾಲದ ಅತ್ಯುತ್ತಮ ಐತಿಹಾಸಿಕ ಕಾದಂಬರಿ

## ಮೋಜಿನ ಮರಣ.

ಮನೋಹರವಾದ ಸಾಮಾಜಿಕ ಪ್ರಹಸನ. ಬೆಲೆ ೧೨ ಆಣೆ.

## ವಿಚಿತ್ರ ಚಟ.

**ಲೋಕಪ್ರಿಯವಾದ ಈ ಗುಪ್ತಪೋಲೀಸರ ಚಾತುರ್ಯದ ಕಾದಂಬರಿಯು ೨ನೆಯ ಆವೃತ್ತಿಯನ್ನು ಹೊರಡಿಸಿರುತ್ತೇವೆ. ಗ್ರಾಹಕರು ತ್ವರೆಮಾಡಬೇಕು ಬೆಲೆ ೮ ಆಣೆ**

**ಟ. ಖ. ೩ ಆಣೆ**

## ನಿರ್ಭಾಗ್ಯ ಭಾರತಿ.

[ಸಾಮಾಜಿಕ-ನಾಟಕ]

ಇದು ಸೆರೆ ಕುಡಿಯುವವರಿಂದಾಗುವ ದುಷ್ಪರಿಣಾಮವನ್ನು ವ್ಯಕ್ತಗೊಳಿಸುವ ದುಃಖಪರ್ಯವಸಾಯಿಯಾದ ನಾಟಕವು ನಿರ್ಭಾಗ್ಯನೆಂಬ ವಿದುಷನು ಮದಿರಾನಂದನೆಂಬ ಸೆರೆಗುಡುಕ ಹಸ್ತಕನ ದುರ್ಬೋಧಕ್ಕೆ ಮನಸ್ಸು ಮಾಡಿ, ಸೆರೆಯು ಒಂದೊಂದೇ ಬಟ್ಟಲುಗಳನ್ನು ಕುಡಿಯಹತ್ತಿ, ತನ್ನ ಅತುಲ ಗೌರವ, ವಿದ್ಯೆ, ಬುದ್ಧಿ, ಸಂಪತ್ತುಗಳನ್ನು ಕಳಕೊಂಡು ದಾರಿಯ ಭಿಕಾರಿಯಾದುದಲ್ಲದೆ, ಪತಿವ್ರತೆಯಾದ ಹೆಂಡತಿ ಹಾಗು ಮುತ್ತಿನಂತಹ ಮಗನನ್ನು ಕೂಡಾ ಕೊಲೆಗೈದು ಸೆರೆಯ ಧುಂದಿನಲ್ಲಿಯೇ ಅಂತವನ್ನೈದಿದ ಹೃದಯದ್ರಾವಕ ಸಂಗತಿಯು ಬಹು ಮಾರ್ಮಿಕವಾಗಿ ಇದರಲ್ಲಿ ವಿವೇಚಿಸಲ್ಪಟ್ಟಿದೆ ಪ್ರತಿಯೊಬ್ಬ ಕನ್ನಡಿಗನು ಇದನ್ನು ಓದಿ ಬುದ್ಧಿಗಲಿಯಬಹುದಾಗಿದೆ. ಬೆಲೆ ೬ ಆಣೆ ಟ ಖ ಬೇರೆ

**ಭಯಂಕರಕೊಲೆ:**—(೨ನೇ ಆವೃತ್ತಿ) ಗ್ಲೇಜ ಕಾಗದ, ರಟ್ಟಿನ ಕಟ್ಟು, ಸುಂದರಮುದ್ರಣ ಬೇಗನೆ ತರಿಸಿಕೊಳ್ಳಿರಿ. ಬೆಲೆ ೧೨ ಆಣೆ

ಇಂದುಮುಖಿ:—ಪತ್ತೇದಾರಿ ಕಥೆ. ಗ್ಲೇಜ ಕ್ರೌನ ಪುಟ ೧೧೬. ಮನೋಹರವಾದ ಕಟ್ಟು ಬೆಲೆ ೧೦ ಆಣೆ

ವಿಳಾಸ:—

ಭಿ. ಪ. ಕಾಳೆ,

ಪೋ ಆನಂದವನ ಜಿ. ಧಾರವಾಡ